# ಶೂದ್ರ

ಬೆಲೆ : 2 ರೂ.

ಸುಬಾಷ್ ಚಂದ್ರಸರ್ಕಾರ್—ಮುರಳೀಧರ್—ವಾಸುದೇವನ್ ನಾಯರ್
ಎಂ. ಎನ್. ವ್ಯಾಸರಾವ್—ಜಯಂತ ಕಾಯ್ಕಿಣಿ—ಎಚ್. ಡುಂಡಿರಾಜ್
ಜಿ. ಎನ್. ಮೋಹನ್—ಕನಕ ಹಾ.ಮ.—ಸಿ. ಜಿ. ಮಂಜುಳಾ—ಎಚ್. ಎಸ್.
ಚಂಪಾವತಿ—ಬಿ.ಸಿ. ದೇಸಾಯಿ—ಶಂಕರ ಕಟಗಿ—ಒಂದಷ್ಟು ಪತ್ರಗಳು.



ನನ್ನ ಕಣ್ಣನ್ನೇ ನೋಡುತ್ತ ಕೂರಬೇಡಿ.

ಹೊಸಚಿಂತನೆಯ ದಿಕ್ಕಿನಲ್ಲಿ ಶೂದ್ರ ತಿಂಗಳ ಪತ್ರಿಕೆ

ಸಂಚಿಕೆ : 6, 7 ಏಪ್ರಿಲ್-ಮೇ 1984 ಸಂಪುಟ : 6

ಸಹಾಯಕ ಸಂಪಾದಕರು : ನಿರ್ಮಲರೆಡ್ಡಿ–ಆನಂದಮೂರ್ತಿ

ಮುಖಪುಟದ ಕೃಪೆ: ಕೆ. ಜಿ. ಸುಬ್ರಮಣ್ಯನ್

ಸುಬ್ರಹ್ಮಣ್ಯಂರವರು ಪ್ರಸಿದ್ಧ ಕಲಾವಿದರು. ಹಾಗೆಯೇ ಕಲೆಗೆ ಸಂಬಂಧಿಸಿದಂತೆ ಅಚ್ಚುಕಟ್ಟಾಗಿ ತಿಳಿಯ ಪಡಿಸುವ ಪ್ರಾಧ್ಯಾಪಕರು. ಇವರು ಶಾಂತಿನಿಕೇತನದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. 1982ರಲ್ಲಿ ಕಾಳಿದಾಸ ಪ್ರಶಸ್ತಿ ವಿಜೇತರು. ಇತ್ತೀಚೆಗೆ ಬೆಂಗಳೂರಿಗೆ ಬಂದಿದ್ದಾಗ ಅವರು ಕೊಟ್ಟ ಭಾಷಣ ಅಮೂಲ್ಯವಾದದ್ದು.

ದಯವಿಟ್ಟು ಚಂದಾ ಕಳಿಸಿ. ತುಂಬ ಮಂದಿ ನವೀಕರಿಸಿಲ್ಲ. ಚಂದಾ ಕಳಿಸುವವರು ಚೆಕ್ ಮೂಲಕ (21ರೂ) ಡ್ರಾಫ್ಟ್ ಮೂಲಕ (20ರೂ) ಕಳಿಸಿದರೆ ಅನುಕೂಲವಾದೀತು. ಆಜೀವ ಚಂದಾದಾರರಾಗಲು ಪ್ರಯತ್ನಿಸಿ. ಶೂದ್ರ ಬರದಿದ್ದರೆ ಪತ್ರ ಬರೆಯಿರಿ.

ಆಜೀವ ಚಂದಾ : 200 ರೂ (ಐದು ಕಂತುಗಳಲ್ಲಿ)
ವಾರ್ಷಿಕ ಚಂದಾ : 20 ರೂ

ಶೂದ್ರ ಶ್ರೀನಿವಾಸ್, ಸುದ್ದುಗುಂಟೇಪಾಳ್ಯ, ಡಿ. ಆರ್. ಕಾಲೇಜ್ ಅಂಚೆ,
ಬೆಂಗಳೂರು–560 029

# ಇಂದಿನ ಭಾರತದಲ್ಲಿ ಮಾರ್ಕ್ಸ್

— ಸುಭಾಶ್‌ಚಂದ್ರ ಸರ್ಕಾರ್

ಬ್ರಿಟಿಷ್ ಪತ್ರಿಕೆ ಮತ್ತು ಪಾರ್ಲಿಮೆಂಟುಗಳಲ್ಲಿ ಭಾರತಕ್ಕೆ ಸಂಬಂಧಿಸಿದ ಸಮಸ್ಯೆಗಳು ಚರ್ಚೆಗೆ ಗ್ರಾಸವಾಗಿದ್ದ ಕಾಲದಲ್ಲಿ ಮಾರ್ಕ್ಸ್ ತನ್ನ ಜೀವನದ ಮಹತ್ವದ ಭಾಗವನ್ನು ಲಂಡನ್‌ನಲ್ಲಿ ಕಳೆಯಬೇಕಾಯಿತು. ಭಾರತದಲ್ಲಿ ಆ ಸಮಯದಲ್ಲಿ ನಡೆಯುತ್ತಿದ್ದ ಮುಖ್ಯವಾಗಿ 1857ರ ಅವಧಿಯ ಘಟನೆಗಳು ಬ್ರಿಟಿಷ್ ಪತ್ರಿಕೆಗಳಲ್ಲಿ ಮಹತ್ವದ ಸ್ಥಾನ ಪಡೆಯುತ್ತಿದ್ದುದರಿಂದ ಮಾರ್ಕ್ಸ್ ಈ ಬಗ್ಗೆ ಆಸಕ್ತಿ ತಾಳುವಂತಾಯಿತು. ಭಾರತ ಮತ್ತು ಭಾರತದ ಚರಿತ್ರೆ ಬಗೆಗಿನ ಮಾರ್ಕ್ಸ್‌ನ ಜ್ಞಾನ ತುಂಬಾ ಆಳವಾದುದೇನು ಆಗಿರಲಿಲ್ಲ. ಇಂದಿಗೂ ಒಂದು ಭೂಖಂಡದೋಪಾದಿಯಲ್ಲಿರುವ ಮತ್ತು ವ್ಯಾಪಕ ವೈವಿಧ್ಯತೆ ಪಡೆದಿರುವ ಭಾರತದ ಬಗ್ಗೆ ಬಹುದೂರದಲ್ಲಿದ್ದ ಮಾರ್ಕ್ಸ್ ಅರಿತುಕೊಳ್ಳುವುದು ಸಾಧ್ಯವಿರಲಿಲ್ಲ. ಭಾರತದ ಬಗ್ಗೆ ಆತನ ಜ್ಞಾನ ಆಳವಾಗಿದ್ದಿದ್ದರೆ "ಭಾರತದಲ್ಲಿ ಬ್ರಿಟಿಷರ ಆಡಳಿತ" ಎಂಬ ತನ್ನ ಲೇಖನದಲ್ಲಿ ಭಾರತವು ಇಟಲಿ ಮತ್ತು ಐರ್‌ಲೆಂಡ್‌ಗೆ ಸಮ ಎಂದು ಬರೆಯುತ್ತಿರಲಿಲ್ಲ.

ಇಂದಿನಂತೆ 19ನೇ ಶತಮಾನದ ಮಧ್ಯಭಾಗದಲ್ಲಿ, ಭಾರತ ಮತ್ತು ಯುರೋಪ್ ನಡುವೆ ಸಂಪರ್ಕ ಸೌಲಭ್ಯ ಇಲ್ಲದೆ ಇದ್ದ ಕಾಲದಲ್ಲಿ (ಅಂದು ಸುಯೆಜ್ ಕಾಲುವೆ ಕೂಡ ನಿರ್ಮಾಣವಾಗಿರಲಿಲ್ಲ) ಮತ್ತು ಭಾರತಕ್ಕೆ ಭೇಟಿಯನ್ನೇ ಕೊಡದಿದ್ದ ಯುರೋಪಿಯನ್ನರ ಭಾರತದ ಬಗೆಗಿನ ಜ್ಞಾನ ಅಪೂರ್ವವಾಗಿದ್ದುದು ಮಹತ್ವವಾದುದುದೇನಲ್ಲ. ಯಾವುದು ಮಹತ್ವದ್ದು ಎಂದರೆ ಮೊದಲು ಈಸ್ಟ್ ಇಂಡಿಯಾ ಕಂಪೆನಿ. ತದನಂತರ ಬ್ರಿಟಿಷ್ ಸರ್ಕಾರದ ನೇರ ಆಳ್ವಿಕೆಯ ಕಾಲದಲ್ಲಿ ಬ್ರಿಟಿಷ್ ವಸಾಹತುಶಾಹಿ ಆಡಳಿತ ಭಾರತೀಯರ ಮೇಲೆ ನಡೆಸಿದ ದೌರ್ಜನ್ಯ, ಅದರ ಲಕ್ಷಣ ಮತ್ತು ಅದರ ಪರಿಣಾಮಗಳ ಬಗೆಗಿನ ಮಾರ್ಕ್ಸ್‌ನ ತಿಳುವಳಿಕೆ.

ಬ್ರಿಟಿಷ್ ಅಧಿಕಾರಿಗಳು ಭಾರತದಲ್ಲಿ ತೆರಿಗೆ ವಸೂಲು ಮಾಡಲು ಜನರ ಮೇಲೆ ನಡೆಸಿದ ದೌರ್ಜನ್ಯದ ಬಗ್ಗೆ 1857ರಲ್ಲಿ ಒಂದು ಲೇಖನದಲ್ಲಿ "ದಬ್ಬಾಳಿಕೆಗೆ ತುತ್ತಾದ ಜನ ಆಕ್ರಮಣಕಾರರನ್ನು ದೇಶದಿಂದ ಉಚ್ಚಾಟಿಸಲು ಪ್ರಯತ್ನಿಸುವುದರಲ್ಲಿ ತಪ್ಪೇನಿದೆ— ಎಂದು ವಿಚಾರವಂತ ಮತ್ತು ನಿಷ್ಪಕ್ಷಪಾತ—ದೃಷ್ಟಿಯುಳ್ಳ ಜನ ಕೇಳುವಂತಾಯಿತು"

ಎಂದು ಮಾರ್ಕ್ಸ್ ಬರೆದ. (ಪ್ರಥಮ ಸ್ವಾತಂತ್ರ ಸಂಗ್ರಾಮ—1857-58. ಮಾರ್ಕ್ಸ್ ಎಂಗಲ್ಸ್. ಪುಟ 67) ಭಾರತದಲ್ಲಿ ಅಂದು ನಡೆಯುತ್ತಿದ್ದ ಹಿಂಸೆ—ದಬ್ಬಾಳಿಕೆಯು ಬ್ರಿಟಿಷ್ ಸರ್ಕಾರ ಅನುಸರಿಸುತ್ತಿದ್ದ "ಹಣಕಾಸು ನೀತಿಯ ಒಂದು ಅಂಶವೇ ಆಗಿತ್ತು" ಎಂಬುದನ್ನು ಅರಿತುಕೊಳ್ಳುವಷ್ಟು ಚಿಕಿತ್ಸಕ ದೃಷ್ಟಿ ಮಾರ್ಕ್ಸ್‌ಗಿತ್ತು. ಅಂದಿನ ದಂಗೆಯ ಕಾಲದಲ್ಲಿ ಸಿಪಾಯಿಗಳು ನಡೆಸಿದ್ದರೆನ್ನಲಾದ ಕೃತ್ಯಗಳ ಕತೆಗಳ ಆಧಾರದ ಮೇಲೆ ಯಾವುದೇ ತೀರ್ಮಾನ ಸಾಧ್ಯವಿಲ್ಲ. ಏಕೆಂದರೆ "ಭಾರತದಲ್ಲಿ ಬ್ರಿಟಿಷರು ನಡೆಸಿದ ಕೃತ್ಯಗಳನ್ನೆಲ್ಲಾ ಸಾಹಸವೃತ್ತಿ ಮತ್ತು ಅನಿವಾರ್ಯತೆಗಳ ಜೊತೆ ತಳುಕು ಹಾಕಿ, ಅವುಗಳ ಹಿಂದೆ ಅಡಗಿದ್ದ ಅಮಾನುಷತೆಯ ವಿವರಗಳನ್ನು ಮರೆಮಾಚಿ ಕೇವಲ ಭಾರತೀಯರು ನಡೆಸಿದ ಕೃತ್ಯಗಳನ್ನು ಉದ್ದೇಶಪೂರ್ವಕವಾಗಿ ಉತ್ಪ್ರೇಕ್ಷಿಸಲಾಗಿತ್ತು ಎಂಬುದನ್ನು ಮರೆಯಬಾರದು" ಎನ್ನುತ್ತಾನೆ ಮಾರ್ಕ್ಸ್. (ಅದೇ ಪು. 81)

ಹಲವಾರು ವಿಷಯಗಳಲ್ಲಿ ಮಾರ್ಕ್ಸ್ ಜೊತೆ ಸಹಮತ ಹೊಂದಿದ್ದ ಎಂಗಲ್ಸ್ ಹೇಳುವಂತೆ "ಸಿಪಾಯಿದಂಗೆಯ ಮೇಲಿನ ವಿಜಯಮಾತ್ರದಿಂದ ಭಾರತೀಯರ ಬೌದ್ಧಿಕತೆಯ ಮೇಲೆ ಬ್ರಿಟಿಷರ ಹಿಡಿತವೇನು ಹೆಚ್ಚಲಿಲ್ಲ". (ಅದೇ ಪು. 103) ಅರ್ಥಶಾಸ್ತ್ರದ ಪಂಡಿತನೂ ಆಗಿದ್ದ ಮಾರ್ಕ್ಸ್ ಭಾರತದಲ್ಲಿ ಕರಭಾರ ಅತಿ ಕಡಿಮೆ ಎಂಬ ಬ್ರಿಟಿಷರ ಪ್ರಚಾರವನ್ನು ನಂಬಲು ಸಿದ್ಧನಿರಲಿಲ್ಲ. ಇದರ ಬಗ್ಗೆ ಬರೆಯುತ್ತಾ "ಭಾರತದಲ್ಲಿ ಬ್ರಿಟಿಷರು ವಿಧಿಸಿರುವ ತೆರಿಗೆಗಳ ಅತಿ ಕಡಿಮೆ ಭಾರವೂ ಭಾರತೀಯರನ್ನು ವಿಧ್ವಂಸ ಮಾಡಿಬಿಡುತ್ತದೆ—ಎನ್ನುವುದಕ್ಕೆ ಪಾರ್ಲಿಮೆಂಟು ವರದಿ ಮತ್ತು ಭಾರತದ ಸ್ಥಿತಿಯ ಬಗ್ಗೆ ಅಧಿಕಾರವಾಣಿಯಿಂದ ನುಡಿಯುವ ಜನರ ಬರಹಗಳಿಂದ ರಾಶಿರಾಶಿ ಸಾಕ್ಷಿ ಒದಗಿಸಬಹುದು" ಎಂದ ಮಾರ್ಕ್ಸ್.

ಭಾರತದ ಬಗ್ಗೆ ಮಾರ್ಕ್ಸ್‌ಗಿದ್ದ ಸಹಾನುಭೂತಿಯನ್ನು ನಾವು ತಪ್ಪಾಗಿ ಭಾವಿಸುವಂತಿಲ್ಲ. 1857ರ ದಂಗೆಯನ್ನು ಅಡಗಿಸಿದ ವಿಜಯ ಉನ್ಮಾದದಲ್ಲಿ ಬ್ರಿಟಿಷರು ಮುಳಿಗಿದ್ದ ಕಾಲದಲ್ಲಿ ಲಂಡನ್‌ನಲ್ಲಿದ್ದುಕೊಂಡು ಮಾರ್ಕ್ಸ್ ಈ ನಿಲುವು ತಳೆದಿದ್ದ ಎಂಬುದು ಭಾರತದ ಬಗ್ಗೆ ಅವನಿಗೆ ಇದ್ದ ಕಳಕಳಿಯ ಪ್ರಾಮಾಣಿಕತೆಯನ್ನು ತೋರಿಸುತ್ತದೆ. ಯಾವುದೇ ಪ್ರತಿಫಲ ಬಯಸದೆ ಮತ್ತು ಇಂತಹ ಕ್ರಾಂತಿಕಾರಿ ನಿಲುವು ತಳೆಯುವುದು ಫ್ಯಾಶನ್ ಆಗದಿದ್ದ ಕಾಲದಲ್ಲಿ ಭಾರತದ ಪರವಾಗಿ ವಾದಮಾಡಿದ ಮಾರ್ಕ್ಸ್‌ನನ್ನು ಇಂದು ಭಾರತ ನೆನೆಯುವುದಕ್ಕೆ ಕಾರಣವಿಲ್ಲದಿಲ್ಲ.

## ಬಂಡವಾಳಶಾಹಿಯ ಆಂತರಿಕ ಬಿರುಕು

ಕೈಗಾರಿಕಾ ಕ್ರಾಂತಿ ಹುಟ್ಟು ಹಾಕಿದ ಆರ್ಥಿಕ ರಚನೆಯ ಬಗ್ಗೆ 125 ವರ್ಷಗಳಷ್ಟು ಹಿಂದೆ ಮಾರ್ಕ್ಸ್ ಮಂಡಿಸಿದ್ದ ವಿಶ್ಲೇಷಣೆಯು ಇಂದಿಗೂ ಅನ್ವಯಿಸಬಲ್ಲ

ದಾಗಿದೆ. ಮಾರ್ಕ್ಸ್ ಮತ್ತು ಎಂಗಲ್ಸರು 1848ರಲ್ಲಿ ಪ್ರಕಟಿಸಿದ "ಕಮ್ಯುನಿಸ್ಟ ಪ್ರಣಾಳಿಕೆ" ಯಲ್ಲಿನ "ವಿಶ್ವ ಮಾರುಕಟ್ಟೆಯನ್ನು ಶೋಷಿಸುವುದರ ಮೂಲಕ ಭೂರ್ಜ್ವಾಗಳು ಉತ್ಪಾದನೆ ಮತ್ತು ಅನುಭೋಗಕ್ಕೆ "ವಿಶ್ವರೂಪ ನೀಡಿದರು" ಎಂಬ ಮಾತ್ರು ಅಂದಿಗಿಂತ ಇಂದು ಹೆಚ್ಚು ಸತ್ಯವಾಗಿದೆ. ಪ್ರತಿದೇಶದಲ್ಲೂ ಇಂದು ಕಂಡುಬರುವ ಪಂಚತಾರಾ ಹೋಟಲುಗಳು, ಗಗನಚುಂಬಿ ಕಟ್ಟಡಗಳು, ವೈಭವೋಪೇತ ವಸ್ತುಗಳು, ಐಷಾರಾಮ ವಸ್ತುಗಳು ಮತ್ತು ಹೆಚ್ಚುತ್ತಿರುವ ದಿವಾಳಿಯೆದ್ದ ದರಿದ್ರರ ಸಂಖ್ಯೆಯಲ್ಲಿ ಈ ವಿಶ್ವರೂಪವನ್ನು ಕಾಣಬಹುದು. ಒಂದು ಕಡೆ ಅಮೆರಿಕಾ-ಪಶ್ಚಿಮ ಯುರೋಪು ಮತ್ತು ಜಪಾನ ನಡುವೆ, ಮತ್ತೊಂದು ಕಡೆ ಅಮೆರಿಕಾ ಮತ್ತು ಪಶ್ಚಿಮ ಯುರೋಪು ನಡುವಿನ ಪೈಪೋಟಿಯಿಂದಾದ ಘರ್ಷಣೆ ಮತ್ತು ಅಭಿವೃದ್ಧಿ ದೇಶಗಳು ಅಭಿವೃದ್ಧಿಶೀಲ ದೇಶಗಳ ಮೇಲೆ ಸುಂಕ, ಗಾತ್ರದ ಮೇಲೆ ಮಿತಿ ಮುಂತಾದ ವ್ಯಾಪಾರ ನಿರ್ಬಂಧಗಳ ಗೋಡೆಗಳ ನಿರ್ಮಾಣದಿಂದ ಉಂಟಾಗಿರುವ ಘರ್ಷಣೆಗಳಿಗೆ ಮಾರ್ಕ್ಸ್ ಮತ್ತು ಎಂಗಲ್ಸರವರು ತಮ್ಮ ಪ್ರಣಾಳಿಕೆಯಲ್ಲಿ ಹೇಳಿರುವ ಈ ಕೆಳಗಿನ ಮಾತು ಸಮರ್ಥನೆ ನೀಡುವಂತಿದೆ. "ತಮ್ಮ ವಸ್ತುಗಳಿಗೆ ಬೇಕಾದ ಮಾರುಕಟ್ಟೆಯ ವಿಸ್ತರಣೆಯ ಅನಿವಾರ್ಯತೆಯಿಂದಾಗಿ ಭೂರ್ಜ್ವಾಗಳು ಇಡೀ ವಿಶ್ವದಲ್ಲಿ ಅನ್ವೇಷಣೆ, ಸಂಪರ್ಕ ಮತ್ತು ವಿಶ್ವವ್ಯಾಪ್ತಿ ವಿಸ್ತರಣೆ ಸದಾಕಾಲ ನಡೆಸುತ್ತಿರಬೇಕಾಗುತ್ತದೆ." (ಮಾರ್ಕ್ಸ್—ಎಂಗಲ್ಸ—ಆಯ್ದ ಕೃತಿಗಳು, ಸಂ. 1, ಪು. 113)

ಭೂರ್ಜ್ವಾ ಆರ್ಥಿಕತೆಯು ಕಾಲಕಾಲಕ್ಕೆ ಎದುರಿಸುವ ಆರ್ಥಿಕ ಬಿಕ್ಕಟ್ಟು ಬಂಡವಾಳಶಾಹಿ ವ್ಯವಸ್ಥೆಯ ಸಾರ್ವಕಾಲಿಕ ಲಕ್ಷಣ—ಎಂಬ ಮಾರ್ಕ್ಸ್ ಮಾತು ಇಂದು ವಿಶ್ವದ 125 ದೇಶಗಳ ಒಕ್ಕೂಟವು ('77ರ ಗುಂಪು' ಎಂದು ಕರೆಯುವ) ಒಪ್ಪಿಕೊಂಡಿರುವ "ಇವತ್ತಿನ ಅಂತರ ರಾಷ್ಟ್ರೀಯ ಆರ್ಥಿಕ ದುಸ್ಥಿತಿಯು ರಚನಾತ್ಮಕವಾದುದು" ಅಂದರೆ "ಇದು ಅಂತರ ರಾಷ್ಟ್ರೀಯ ವ್ಯವಸ್ಥೆಯ ಉದರದೊಳಗಿಂದಲೇ ಉದ್ಭವಿಸುವ ಸಮಸ್ಯೆ" ಎಂಬ ಅಧಿಕೃತ ಘೋಷಣೆಯಾಗಿ ಬಿಟ್ಟಿದೆ. ಯಾವುದೇ ಕಾಲಕ್ಕೂ ಅಸಂಬದ್ಧವಾಗಬಹುದಾದ 'ಅಧಿಕೋತ್ಪಾದನೆ' ರೋಗ ಈ ಭೂರ್ಜ್ವಾ ಆರ್ಥಿಕತೆಗಳನ್ನು ಕಾಡುತ್ತಿದೆ. ಈ ಸಮಾಜದಲ್ಲಿನ ಲಭ್ಯ ಉತ್ಪಾದನಾ ಸಾಧನಗಳು ಭೂರ್ಜ್ವಾ ಸಂಪತ್ತನ್ನು ಹೆಚ್ಚಿಸಲು ಶಕ್ತವಾಗಿಲ್ಲ. ಇದಕ್ಕೆ ಕಾರಣ "ಭೂರ್ಜ್ವಾ ರಚನೆಯ ಬಲಿಷ್ಟ ಸಂಕೋಲೆಗಳು ಉತ್ಪಾದನಾ ಸಾಧನಗಳ ಸಾಮರ್ಥ್ಯವನ್ನು ಸೀಮಿತ ವಲಯದೊಳಗೆ ಅದುಮಿಡುವುದರಿಂದ ಸಂಪತ್ತಿನ ಸಂಮೃದ್ಧಿ ಅಸಾಧ್ಯವಾಗಿದೆ" (ಅದೇ ಪು. 114) ಇದರಿಂದಾಗಿ ಬಂಡವಾಳಶಾಹಿಯ ಪಲ್ಲಟ ಸಮಾಜೋ-ಆರ್ಥಿಕ ಆವಶ್ಯಕತೆಯಾಗಿದೆ.

ಭೂರ್ಜ್ವಾ ಸಮಾಜದಲ್ಲಿ ಉಂಟಾಗುವ ಮಿತಿ ಮೀರಿದ ಜನಸಾಂದ್ರತೆ, ಉತ್ಪಾದನಾ ಶಕ್ತಿಗಳ ಕೇಂದ್ರೀಕರಣ ಮತ್ತು ಸಂಪತ್ತಿನ ಮಾಲಿಕತ್ವದ ಏಕಸ್ವಾಮ್ಯತೆಗಳ

ಬೆಳವಣಿಗೆಗಳು ಈ ಸಮಾಜದಲ್ಲಿ ರಾಜಕೀಯ ಕೇಂದ್ರೀಕರಣವನ್ನು ಅನಿವಾರ್ಯವನ್ನಾಗಿ ಬಿಡಿಸುತ್ತವೆ. ಈ ರೀತಿಯ ಎರಡು ಸಮಾನಾಂತರ ಬೆಳವಣಿಗೆಯು ಇಂದು ಸುಸ್ಪಷ್ಟವಾಗಿರುವುದರಿಂದ ಅದರ ವಿವರ ಅನಗತ್ಯ.

## ಮಾನವತಾವಾದಿ ಮಾರ್ಕ್ಸ್

ಸಮಕಾಲೀನ ಸಮಾಜಗಳಿಗೆಲ್ಲಾ ಮಾರ್ಕ್ಸ್ ಅನ್ವಯವಾಗಬಲ್ಲವನಾಗಿದ್ದಾನೆ. ಮಾನವನ ಅಸ್ತಿತ್ವ, ಸಮಾಜಿಕ ರಚನೆಯಲ್ಲಿ ಇಡುಕಿರುವ ಮೂಲಭೂತ ಸಮಸ್ಯೆ ಮತ್ತು ಆ ಸಮಸ್ಯೆಯ ನಿವಾರಣೆಗೆ ಬೇಕಾದ ಪರಿಹಾರ ಕ್ರಮಗಳ ಬಗೆಗಿನ ವಿಶ್ಲೇಷಣೆಯಲ್ಲಿ ಮಾರ್ಕ್ಸ್‌ನ ಸಾರ್ವಕಾಲಿಕತೆ ಅಡಗಿದೆ. ಅನಾದಿಕಾಲದಿಂದಲೂ ಜನರನ್ನು ಕಿತ್ತು ತಿನ್ನುತ್ತಿರುವ ಅಸಮಾನತೆಯ ಬಗ್ಗೆ ಮಾತನಾಡಿದವನು ಮಾರ್ಕ್ಸ್. ಈ ಅಸಮಾನತೆ ಅನಿವಾರ್ಯವೇನಲ್ಲ ಅದನ್ನು ನಿರ್ಮೂಲನ ಮಾಡಬಹುದು ಎಂಬ ವಿಚಾರವನ್ನು ಮುಂದಿಟ್ಟು ಮಾರ್ಕ್ಸ್ ನಮಗೆ ಹೆಚ್ಚು ಮಹತ್ವನಾಗುತ್ತಾನೆ. ಮನುಷ್ಯ-ಮನುಷ್ಯ ನಡುವಿನ ಶೋಷಣೆಯಿಂದ ಮುಕ್ತವಾದ ಸಮಾಜದ ಚಿತ್ರವನ್ನು ತುಂಬಾ ವಸ್ತುನಿಷ್ಟವಾಗಿ ಮಾರ್ಕ್ಸ್ ಕಲ್ಪಿಸಿಕೊಂಡಿದ್ದ. ಇಂತಹ ಸಮಾಜವನ್ನು ಹೇಗೆ ವಾಸ್ತವಕ್ಕಿಳಿಸಬೇಕು ಎಂಬುದು ಅವನಿಗೆ ತಿಳಿದಿರಲಿಕ್ಕೆ ಸಾಕು. ಒಬ್ಬ ಪ್ರವಾದಿಯಂತೆ ಕಲ್ಪಿತ ಸ್ವರ್ಗಕ್ಕೆ ಬದಲಾಗಿ ಇದೇ ಭೂಮಿಯಲ್ಲಿ ಮತ್ತು ನಿಗಧಿತ ಕಾಲದಲ್ಲಿ ಸುಂದರ ಭವಿಷ್ಯದ ಕಲ್ಪನೆಯನ್ನು ಮತ್ತು ಆ ಕಲ್ಪನೆಯನ್ನು ಹೇಗೆ ಈಡೇರಿಸಿಕೊಳ್ಳಬೇಕು ಎಂಬುದನ್ನು ಪ್ರಥಮ ಭಾರಿಗೆ ಮಾರ್ಕ್ಸ್ ಮಾನವಲೋಕಕ್ಕೆ ತೋರಿಸಿಕೊಟ್ಟ. ಇಂತಹ ಭವಿಷ್ಯವನ್ನು ವಾಸ್ತವಕ್ಕಿಳಿಸುವ ಕಾರ್ಯದಲ್ಲಿ ಎಲ್ಲರ ಸಹಕಾರವನ್ನು ಬಯಸಿದ್ದ ಮಾರ್ಕ್ಸ್. ಅಸಮಾನತೆ ಮತ್ತು ಶೋಷಣೆಯನ್ನು ಖಂಡಿಸಿದ ಮಾರ್ಕ್ಸ್, ಸಮಾನತೆ ಮತ್ತು ಶೋಷಣೆ ರಹಿತ ಸಮಾಜದ ಚಿತ್ರವನ್ನು ರೂಪಿಸಿದ್ದ ಮಾರ್ಕ್ಸ್-ಒಬ್ಬ ದೊಡ್ಡ ಮಾನವತಾವಾದಿ ಮನುಷ್ಯನ ಅಸ್ತಿತ್ವವಿರುವವರೆಗೂ ಅವನು ಸಮಾಜಕ್ಕೆ ಉತ್ತರವಾಗಿರುತ್ತಾನೆ.

19ನೇ ಶತಮಾನದ ಆದಿಭಾಗದ ಜರ್ಮನಿಯಲ್ಲಿ ರಾಜಕೀಯ ಅರ್ಥಶಾಸ್ತ್ರ ಕುರಿತು ನಡೆಯುತ್ತಿದ್ದ ಚರ್ಚೆ ಅಧ್ಯಯನಗಳ ಬಗ್ಗೆ ಬರೆಯುತ್ತಾ ಮಾರ್ಕ್ಸ್ ಜರ್ಮನಿಯ ಪ್ರಾಧ್ಯಾಪಕರು ಮತ್ತು ಬುದ್ಧಿಜೀವಿಗಳು ಹೊಸ ವಿಚಾರಗಳನ್ನು ಇಂಗ್ಲೆಂಡ್ ಮತ್ತು ಫ್ರಾನ್ಸ್‌ನಿಂದ ಆಮದು ಮಾಡಿಕೊಳ್ಳುತ್ತಿದ್ದುದ್ದನ್ನು ಟೀಕಿಸುತ್ತಾನೆ. ಬೇರೆ ದೇಶಗಳಿಂದ ಕಡತಂದ ವಿಚಾರ ಗುಹೇಗೆ ಜರ್ಮನಿಯಲ್ಲಿ ವಿರೂಪಗೊಂಡವು ಮತ್ತು ಇದರಿಂದಾಗಿ ಉಂಟಾದ ವೈಚಾರಿಕ ದಿವಾಳಿತನ ಮತ್ತು ಗೊಂದಲಕ್ಕಿಡಾದ ಪ್ರಜ್ಞೆಯನ್ನು ಗುರುತಿಸುತ್ತಾನೆ ಮಾರ್ಕ್ಸ್. ಈ ವಿಕೃತಿಯನ್ನು ಸರಿಪಡಿಸಿಕೊಳ್ಳದೆ ಮುಚ್ಚಿಕೊಳ್ಳುವ ಪ್ರವೃತ್ತಿಯನ್ನು ಕಂಡು ಮಾರ್ಕ್ಸ್ ಕಿಡಿಕಿಡಿಯಾಗುತ್ತಾನೆ.

## ಭಾರತದಲ್ಲಿ ಮಾರ್ಕ್ಸ್‌ವಾದದ ಪ್ರಗತಿ

ಜರ್ಮನಿಯಲ್ಲಿ ವೈಚಾರಿಕತೆಗೆ ಬಂದ ದುಸ್ಥಿತಿಯೇ ಭಾರತದಲ್ಲೂ ಮಾರ್ಕ್ಸ್‌ನ ವಿಚಾರಗಳಿಗೆ ಬಂದಿದೆ. ವರ್ಗಸಂಘರ್ಷ ಸಾರ್ವಕಾಲಿಕವಾದುದು ಎಂದ ಮಾರ್ಕ್ಸ್ ಪ್ರತಿದೇಶಗಳಲ್ಲಿನ ಸಂಘರ್ಷದ ವಿಶಿಷ್ಟ ಸ್ಥಳೀಯ ಲಕ್ಷಣಗಳ ಬಗ್ಗೆ ಸದಾ ಎಚ್ಚರದಿಂದಿದ್ದ. ಆದರೆ ಭಾರತದಲ್ಲಿನ ಮಾರ್ಕ್ಸ್‌ನ ಅನುಯಾಯಿಗಳು ನಮ್ಮ ಸಮಾಜ ವಿಶಿಷ್ಟ ಪ್ರಾದೇಶಿಕ ಮತ್ತು ಜನಜೀವನದಲ್ಲಿನ ವೈವಿಧ್ಯತೆಗಳನ್ನು ಪರಿಗಣಿಸದೆ, ರಾಜಕೀಯ ಬದಲಾವಣೆಗೆ ರೂಪಿಸಿದ ಕಾರ್ಯಕ್ರಮಗಳು ಆಚರಣೆಯಲ್ಲಿ ವಿಫಲವಾದುದರಿಂದ ಅವುಗಳನ್ನು ಕೈಬಿಡಬೇಕಾಯಿತು. ಭಾರತ ಕಮುನಿಷ್ಟರು ಸಾಮಾನ್ಯವಾಗಿ ಇಂಗ್ಲಿಷ್‌ನಲ್ಲಿ ಬರೆದ ಗ್ರಂಥ ಲೇಖನಗಳಲ್ಲಿ ಮಾರ್ಕ್ಸ್, ಎಂಗೆಲ್ಸ್, ಲೆನಿನ್, ಸ್ಟಾಲಿನ್ ಮತ್ತು ಯುರೋಪ್‌ನ ಇತರೆ ಸಮಕಾಲೀನ ಕಮ್ಯುನಿಸ್ಟರ ರಾಶಿರಾಶಿ ಹೇಳಿಕೆಗಳನ್ನು ಬಳಸಿರುವುದು ಕಂಡುಬರುತ್ತದೆ. ಈ ಎಲ್ಲಾ ಬರಹ ವಿಚಾರಗಳ ಫಲ–ಭಾರತಲ್ಲಿನ ದುರ್ಬಲ ಕಮ್ಯುನಿಸ್ಟ್ ಚಳುವಳಿ.

## ಪಾಶ್ಚಾತ್ಯೀಕರಣ

ಭಾರತೀಯರು ಸಾಮಾನ್ಯವಾಗಿ ಯುರೋಪು, ಮುಖ್ಯವಾಗಿ ಇಂಗ್ಲೆಂಡ್‌ನಲ್ಲಿ ಮಾರ್ಕ್ಸ್‌ವಾದದ ದೀಕ್ಷೆ ಪಡೆದವರು. ಇದರಿಂದಾಗಿ ಭಾರತದಲ್ಲಿನ ಮಾರ್ಕ್ಸ್‌ವಾದದಲ್ಲಿ ಪಾಶ್ಚಾತ್ಯ ಛಾಯೆ ಸ್ಪಷ್ಟವಾಗಿ ಕಾಣುತ್ತದೆ. ಭಾರತೀಯ ರಾಷ್ಟ್ರೀಯ ಪ್ರವಾಹದಲ್ಲಿ ಮಾರ್ಕ್ಸ್‌ವಾದ ಬೆರೆಯಲಿಲ್ಲ. ಮಾರ್ಕ್ಸ್‌ವಾದದ ಅನುಷ್ಠಾನ ಪೂರ್ವನಿಯೋಜಿತ ಯೋಜನೆಯಂತೆ ನಡೆಯಬೇಕೆಂಬುದು ನಿಜವಾದರು ಸಹ ಅದನ್ನು ವಾಸ್ತವಿಕ ಪರಿಸ್ಥಿತಿಗೆ ಸರಿಹೊಂದಿಸಿಕೊಳ್ಳಬೇಕಾಗುತ್ತದೆ. ಭಾರತದಲ್ಲಿ ಇದು ನಡೆಯಲಿಲ್ಲ. ಇದರಿಂದಾಗಿ ಭಾರತಧಲ್ಲಿ ಮಾರ್ಕ್ಸ್‌ವಾದಿಗಳು ಒಂದಾದಮೇಲೆ ಒಂದು ಅನಾಹುತಗಳನ್ನು ಮಾಡಿದುದು ಆಶ್ಚರ್ಯದ ವಿಷಯವೇನಲ್ಲ. 'ಸ್ವಯಂ ಆಡಳಿತ ಅಧಿಕಾರ' ಆಧರಿತ ರಾಷ್ಟ್ರೀಯ ಪ್ರಶ್ನೆ ಬಂದು ಪಾಕಿಸ್ಥಾನದ ಬೇಡಿಕೆಗೆ ಬೆಂಬಲ ಕೊಟ್ಟಿದ್ದು, 1947ರ ಬಂಗಾಳ ವಿಭಜನೆ ಬಗ್ಗೆ ಗೊಂದಲ, ಸ್ವತಂತ್ರ ಭಾರತದ ಸರ್ಕಾರದ ನಿಜಸ್ವರೂಪ ಅರಿಯುವುದರಲ್ಲಿ ವಿಳಂಬ, 1975ರ ತುರ್ತುಪರಿಸ್ಥಿತಿಯ ಬಗ್ಗೆ ದುರ್ಬಲನಿಲುವು, ಚೀನಾಕ್ರಾಂತಿ, ರಷ್ಯ ಇಂಡಿಯಾ ಸಂಬಂಧಗಳ ಬಗೆಗಿನ ನಿಲುವು ಮುಂತಾದವು ಈ ಕೆಲವು ಅನಾಹುತಗಳು. ಈ ತಪ್ಪುಗಳನ್ನು ಇಂದು ಕಮ್ಯುನಿಸ್ಟರು ಸಾರ್ವಜನಿಕವಾಗಿ ಒಪ್ಪಿಕೊಂಡಿರುವುದರಿಂದ ಅದರ ಬಗ್ಗೆ ವಿವಾದಕ್ಕೆ ಎಡೆ ಇಲ್ಲದಂತಾಗಿದೆ.

ಬ್ರಿಟನ್ ಮತ್ತು ರಷ್ಯಾದ ಕಮ್ಯುನಿಸ್ಟ ನಾಯಕರನ್ನು ಏಕಪಕ್ಷೀಯವಾಗಿ ಅನುಕರಿಸುತ್ತಿರುವ ಭಾರತೀಯ ಕಮ್ಯುನಿಸ್ಟರಿಗೆ ನಮ್ಮ ವಿಶಿಷ್ಟ ಪರಿಸ್ಥಿತಿಯತ್ತ ಕಣ್ಣು ಹಾಯಿಸಲು ಸಾಧ್ಯವಾಗಲೇ ಇಲ್ಲ. ಭಾರತದ ಪ್ರಾದೇಶಿಕ, ಆರ್ಥಿಕ, ಸಾಂಸ್ಕೃತಿಕ

ಮತ್ತು ಜನಾಂಗೀಯ ವಿಶಿಷ್ಟತೆಗಳನ್ನು ಗಣನೆಗೆ ತೆಗೆದುಕೊಳ್ಳದೆ ಮಾರ್ಕ್ಸಿಸ್ಟರು ರೂಪಿಸಿದ್ದ 'ರಾಷ್ಟ್ರೀಯ' ನೀತಿಗಳು ದೋಷಪೂರ್ಣ ಮತ್ತು ಅಸಂಬದ್ಧವಾದುದು ಅನಿವಾರ್ಯವಾಗಿತ್ತು. ಇಂಗ್ಲೆಂಡ್ ಮತ್ತು ರಷ್ಯಾಗಳಲ್ಲಿ ರಾಷ್ಟ್ರೀಯ ಮತ್ತು ಭಾಷಾ ಸಮಸ್ಯೆಗಳು ಭಾರತದಲ್ಲಿಯಂತೆ ಸಂಕೀರ್ಣವು ಆಸ್ಫೋಟಕಾರಿಯಾಗಿಲ್ಲ. 1900-30ರ ದಶಕದಲ್ಲಿ ಇಂಗ್ಲೆಂಡ್‌ನ ಭಾಷಾಸಮಸ್ಯೆ ಇವತ್ತಿನಷ್ಟು ಭೀಕರವಾಗಿರಲಿಲ್ಲ. ಇಂದು ಕೂಡ ಇಂಗ್ಲೆಂಡ್‌ನ ಭಾಷಾಸಮಸ್ಯೆಯು ಭಾರತದ ಸಮಸ್ಯೆಗೆ ಹೋಲಿಸಿದರೆ ಅಷ್ಟೊಂದು ಆತಂಕಕಾರಿಯಾಗಿಲ್ಲ. ಅಲ್ಪಸಂಖ್ಯಾತರ ಬೇಡಿಕೆಗಳು ಚಳುವಳಿಗಳು ಸೇರಿಕೊಂಡು ಭಾರತದ ಭಾಷಾಸಮಸ್ಯೆಯು ಮತ್ತಷ್ಟು ಜಟಿಲವಾಗಿದೆ. ಭಾರತೀಯ ಕಮ್ಯುನಿಸ್ಟರಿಗೆ ಮಾರ್ಗದರ್ಶನ ನೀಡುತ್ತಿರುವ, ವಿಶ್ವ ಕಮ್ಯುನಿಸ್ಟ ಚಳುವಳಿಯ ನಾಯಕಪಟ್ಟವನ್ನು ಆಕ್ರಮಿಸಿಕೊಂಡಿರುವ ರಷ್ಯ ಕಮ್ಯುನಿಸ್ಟ ನಾಯಕರಿಗಾಗಲಿ ಮತ್ತು ಯೂರೋಪಿನ ಕಮ್ಯುನಿಷ್ಟ ನಾಯಕರಿಗಾಗಲಿ ಭಾರತದ ಭಾಷಾವಾರು, ಕೋಮುವಾರು ಮತ್ತು ಪ್ರಾದೇಶಿಕ ಸಮಸ್ಯೆಗಳ ಸ್ವರೂಪವನ್ನು ತಿಳಿಯಲು ಅವುಗಳ ಪರಿಚಯವೇ ಅವರಿಗಿರಲಿಲ್ಲ. ಇದರಿಂದಾಗಿ ಕಳೆದ ಐದು ದಶಕಗಳಿಂದ (ವಾಸ್ತವವಾಗಿ ಆರು ದಶಕಗಳಿಂದ) ಭಾರತೀಯ ಕ್ಷೇತ್ರದಲ್ಲಿ ಅಸ್ತಿತ್ವದಲ್ಲಿದ್ದರೂ ಕೂಡ ಮಾರ್ಕ್ಸವಾದ ಇಲ್ಲಿ ಒಂದು ಪ್ರಬಲ ರಾಜಕೀಯ ಶಕ್ತಿಯಾಗಿ ರೂಪುಗೊಳ್ಳಲಾಗಲಿಲ್ಲ. ಕಮ್ಯುನಿಸ್ಟ ಚಳುವಳಿ ತುಂಬಾ ಪ್ರಬಲವಾಗಿರುವ ಪಶ್ಚಿಮ ಬಂಗಾಳದ ವಿಧಾನಸಭೆಯಲ್ಲಿ ಬಹುಸಂಖ್ಯಾತರು ಕಮ್ಯುನಿಸ್ಟ ಸದಸ್ಯರಿದ್ದು, ಮುಖ್ಯಮಂತ್ರಿಯನ್ನೊಳಗೊಂಡು ಹಲವಾರು ಮಂತ್ರಿಗಳು ನಿಷ್ಠಾವಂತ ಕಮ್ಯುನಿಸ್ಟರಿದ್ದು ಕೂಡ—ಅಲ್ಲಿನ ಆಡಳಿತ ರಂಗದಲ್ಲಿ ಮಾರ್ಕ್ಸನ ವಿಚಾರಗಳ ಪ್ರಭಾವ ಹೇಳಿಕೊಳ್ಳುವಂತಹ ಸ್ಥಿತಿಯಲ್ಲಿಲ್ಲ. ಆಚರಣೆಯಲ್ಲಿ ಇದು ಇನ್ನೂ ಕಡಿಮೆ.

## ಶ್ರೀಮಂತರ ಸೆರೆಯಲ್ಲಿ ಮಾರ್ಕ್ಸವಾದ

ಭಾರತದಲ್ಲಿ ಮಾರ್ಕ್ಸವಾದವು ಸಿರಿವಂತ ಬುದ್ಧಿಜೀವಿಗಳ ಒಣಹರಟೆಯ ವಸ್ತುವಾಗಿದೆ. ಈ ಬುದ್ಧಿಜೀವಿ ತರುಣರು ತಮ್ಮ ತಂದೆ ತಾಯಿಯ ಅಪಾರ ಸಂಪತ್ತು ಮತ್ತು ಸ್ಥಾನಮಾನಗಳ ನೆರವಿನಿಂದ ಅಮೆರಿಕಾ ಇಂಗ್ಲೆಂಡ್‌ನ ಪ್ರಸಿದ್ಧ ವಿಶ್ವವಿದ್ಯಾನಿಲಯಗಳಲ್ಲಿ ಶಿಕ್ಷಣ ತರಬೇತಿ ಪಡೆಯುವ ಭಾಗ್ಯವನ್ನು ಪಡೆದಿದ್ದಾರೆ. ಈ ಜನ ತಾವೇ ಖಂಡಿಸುತ್ತಿರುವ ವ್ಯವಸ್ಥೆಯಲ್ಲಿ ಉನ್ನತ ಲಾಭದಾಯಕ ಸ್ಥಾನಗಳಲ್ಲಿ ವಿಜೃಂಭಿಸುತ್ತಿರುತ್ತಾರೆ. ಭಾರತದಲ್ಲಿ ಸಂಘಟಿತ ಮಾರ್ಕ್ಸವಾದವು ಜನರ ಜೀವನದಿಂದ ದೂರ ಸರಿದಿದೆ. ದೇಶದಲ್ಲಿ ನಡೆಯುವ ಎಲ್ಲಾ ಚಟುವಟಿಕೆಗಳನ್ನು, ಅವು ಎಷ್ಟೇ ಉಪಯುಕ್ತವಾಗಿದ್ದರೂ ಅಥವಾ ಸಾಮಾಜಿಕವಾಗಿ ಅವಶ್ಯಕವೆನಿಸಿದ್ದರೂ ಟೀಕಿಸುವ ಹೀಯಾಳಿಸುವ ಪದಪುಂಜವನ್ನು ಮಾತ್ರ ಬೆಳೆಸುವಲ್ಲಿ ಮಾರ್ಕ್ಸವಾದ ನಿರತವಾಗಿರುವಂತಿದೆ. ಹೀಗೆ

ಜನರ ಜೀವನದಿಂದ ದೂರ ಸರಿಯುತ್ತಿರುವ ಮಾರ್ಕ್ಸ್‌ವಾದ ಈ ಜನರ ಹಾವಳಿಯಿಂದ ಜನ ವಿರೋಧಿ ಪ್ರತಿಗಾಮಿ ವಿಚಾರವಾಗುವ ಅಪಾಯದಲ್ಲಿ ಸಿಲುಕಿದೆ. ನಕ್ಸಲೈಟ್ ಚಳುವಳಿಗೆ ಬೆನ್ನೆಲುಬು ಒದಗಿಸಿದ ಜನ ಮುಖ್ಯವಾಗಿ ಪಶ್ಚಿಮ ಬಂಗಾಳದ ಶ್ರೀಮಂತ ಪೊಲೀಸ್ ಅಧಿಕಾರಿ ರೆವಿನ್ಯು ಅಧಿಕಾರಿ ಮತ್ತು ಕಾಂಗ್ರೆಸ್ ನಾಯಕರ ಸಂತತಿಯವರು ಎಂಬುದು ಗಮನಿಸಬೇಕಾದ ವಿಚಾರ. ಈ ಜನತೆಯಲ್ಲಿ ರಾಜಕೀಯವಾಗಿ ಉಗ್ರಗಾಮಿಗಳಾಗಲು ಅವಶ್ಯವಾದ ವರ್ಗ ಲಕ್ಷಣವಿರಲಿಲ್ಲ. ಅದಕ್ಕಿಂತ ಹೆಚ್ಚಾಗಿ ತಮ್ಮನ್ನು ತಾವು ದಲಿತ ಕಾರ್ಮಿಕ ಬಡ ಕೃಷಿಕರ ಜೊತೆ ಒಂದಾಗಲು ಬೇಕಾದ ಆಶಕ್ತಿಯಾಗಲಿ, ಸಮರ್ಥವಾಗಲಿ ಇರಲಿಲ್ಲ. ಸ್ವಲ್ಪಕಾಲ ನಕ್ಸಲೈಟ್ ಜೊತೆ ಉಗ್ರಗಾಮಿಗಳಾಗಿ ನಂತರ ವ್ಯವಸ್ಥೆಯಲ್ಲಿನ ಉನ್ನತ ಸ್ಥಾನಗಳನ್ನೇರಿ ಅಲ್ಲಿನ ದಂತಗೋಪುರದಲ್ಲಿನ ಕ್ರಾಂತಿಕಾರಿಗಳಾಗುವುದು ಇವರಿಗೆ ಕಷ್ಟವಾಗಿರಲಿಲ್ಲ.

ಈ ಬೆಳವಣಿಗೆಗೆ ವಿರುದ್ಧದಲ್ಲಿ ಮತ್ತೊಂದು ಸಮಾನಂತರ ಬೆಳವಣಿಗೆಯನ್ನು ಗುರಿತಿಸುವುದು ಸಾಧ್ಯವಿದೆ. ಹಳೆಯ ತಲೆಮಾರಿನ ಕಮ್ಯುನಿಸ್ಟ ನಾಯಕರ ಜೀವನ ಚರಿತ್ರೆಗಳಲ್ಲಿ ಕಣ್ಣಾಡಿಸಿದರೆ ನಮಗೆ ಸ್ಪಷ್ಟವಾಗುವ ಅಂಶವೆಂದರೆ—ಅವರೂ ಸಹ ಶ್ರೀಮಂತ ಮನೆತನಗಳ ಸಂತತಿಯವರು ಮತ್ತು ಸರ್ವೇಸಾಮಾನ್ಯವಾಗಿ ಇಂಗ್ಲೆಂಡಿನಲ್ಲಿ ಮಾರ್ಕ್ಸ್‌ವಾದದ ದೀಕ್ಷೆ ಪಡೆದವರು. ಆದರೆ ಹಳೆ ತಲೆಮಾರಿನ ಕಮ್ಯುನಿಸ್ಟರು ಬಹಳ ಮಟ್ಟಿಗೆ ಪ್ರಾಮಾಣಿಕರು ಮತ್ತು ನಿಷ್ಠಾವಂತರೂ ಆಗಿದ್ದರು. ಬ್ರಿಟಿಷರು ಮತ್ತು ಪ್ರಸಿದ್ಧ ಭಾರತೀಯ ನಾಯಕರ ವಿರೋಧವನ್ನು ಲೆಕ್ಕಿಸದೆ ಸಹಜವಾಗಿ ಕಮ್ಯುನಿಸಂ ವಿಚಾರಗಳಿಗೆ ಮನಸೋತು, ಈ ಜನ, ಒಂದು ವಿಚಾರಕ್ಕೆ ಕಟ್ಟು ಬಿದ್ದು ಅಪಾರ ಹಣ ಗಳಿಸುವ ಅವಕಾಶಗಳನ್ನು ಮತ್ತು ಉನ್ನತ ಸ್ಥಾನಗಳನ್ನು ತ್ಯಾಗಮಾಡಿದ್ದರು. ಕಮ್ಯುನಿಸಂನ ಪ್ರಾರಂಭದ ದಿಸೆಯಲ್ಲಿ ಪ್ರವೇಶಿಸಿದ ಈ ಜನ ಅತ್ಯಂತ ಬುದ್ಧಿಶಾಲಿಗಳು ಮತ್ತು ಸಾಮಾಜಿಕವಾಗಿ ಅಪಾರ ಪ್ರಭಾವಶಾಲಿಗಳೂ ಆಗಿದ್ದರು. ಇವರುಗಳು ಸುಲಭವಾಗಿ ಉನ್ನತ ಸ್ಥಾನ ಮತ್ತು ಅಪಾರ ಹಣಗಳಿಸುವ ಮಾರ್ಗ ಹಿಡಿಯಬಹುದಿತ್ತು. ಆದರೆ ಸಿದ್ಧಾಂತಕ್ಕೆ ಕಟ್ಟುಬಿದ್ದ ಜನ ಸಹಜವಾಗಿ ಅವುಗಳನ್ನು ತ್ಯಾಗಮಾಡಿದ್ದರು.

ಪ್ರಾರಂಭದ ದಿಶೆಯಲ್ಲಿ ಕಷ್ಟ-ಯಾತನೆಗಳನ್ನು ಅನುಭವಿಸಿದರೂ ಕೂಡ, ಕಮ್ಯುನಿಸ್ಟ ನಾಯಕರು ತಮ್ಮ ಮಧ್ಯಮ ವರ್ಗದ ಕೋಟೆಯಿಂದ ಮುಕ್ತವಾಗಿ ಹೊರ ಬರಲಾಗಲೇ ಇಲ್ಲ. ಜನಸಾಮಾನ್ಯರ ದೃಷ್ಟಿಯಲ್ಲಿ ಗೌರವ-ಮನ್ನಣೆಗಳನ್ನು ಕಮ್ಯುನಿಸ್ಟರು ಪಡೆಯಲು ಅವರ ಪಕ್ಷನಿಷ್ಠೆ ಮತ್ತು ಬಡಜನರ ವಿಮೋಚನೆಗಾಗಿ ಯಾತನೆ ಅನುಭವಿಸಲು ತೋರಿದ ಸಿದ್ಧತೆಗಳು ನೆರವಾದವು. ಕರಿನೀರಿನ ಶಿಕ್ಷೆ ಅನುಭವಿಸಲು ಅಂಡಮಾನ್‌ಗೆ ವರ್ಗಾವಣೆಗೆ ಕಮ್ಯುನಿಸ್ಟರು ತಯಾರಾದುದರಿಂದ ಇವತ್ತಿಗೂ ಬಲಿಷ್ಟವಾಗಿರುವ ಪಶ್ಚಿಮ ಬಂಗಾಳದಲ್ಲಿ ಕಮ್ಯುನಿಸ್ಟ ಪಕ್ಷ ಪುನರ್‌ಜನ್ಮ ಪಡೆಯುವಂತಾಯಿತು.

ಇದರಿಂದಾಗಿ ಬ್ರಿಟಿಷರ ಜೊತೆ ಶಾಮೀಲಾಗಿದ್ದ ಕಮ್ಯುನಿಸ್ಟರು ಜನರ ಕೋಪದಿಂದ ಪಾರಾದರು. ಅಂದು ಕಮ್ಯುನಿಸ್ಟರು ಸುಬಾಸ್ ಚಂದ್ರಬೋಸ್‌ರನ್ನು ಜಪಾನಿಯರ 'ಕೈಗೊಂಬೆ' ಎಂದು ಟೀಕಿಸುವುದಕ್ಕೂ ಹಿಂಜರಿದಿರಲಿಲ್ಲ. ದೇಶದ ನಾಯಕನೊಬ್ಬನ ಮೇಲೆ ನಡೆದ ಇಂತಹ ಟೀಕೆಯಿಂದ ಜನ ರೊಚ್ಚಿಗೆದ್ದಿದ್ದರು. ಈಗ ಕಮ್ಯುನಿಸ್ಟರಿಗೆ ತಮ್ಮ ತಪ್ಪಿನ ಅರಿವಾಗಿದೆ. "ಸುಭಾಸ್ ಚಂದ್ರಬೋಸ್‌ರವರು ಜಪಾನಿಯರ ಕೈಗೊಂಬೆಯಾಗಿದ್ದರು ಎಂಬ ಟೀಕೆ ಆಧಾರರಹಿತ ಎಂದು ತಿಳಿದ ತಕ್ಷಣ ತಿರಸ್ಕರಿಸಲಾಗಿದೆ. ಆ ಘಟನೆಯ ಬಗ್ಗೆ ನಿಜಾಂಶ ಹೊರಬಿದ್ದ ಮೇಲೆ ನೇತಾಜಿಯವರ ಬಗ್ಗೆ ಬಳಸಿದ ಹೀನ ಟೀಕೆಗಾಗಿ ಪಶ್ಚಾತ್ತಾಪ ವ್ಯಕ್ತಪಡಿಸಲಾಯಿತು" ಎಂದು ತಮ್ಮ ಗ್ರಂಥವೊಂದರಲ್ಲಿ ಕಮ್ಯುನಿಸ್ಟ ನಾಯಕರಲ್ಲಿ ಒಬ್ಬರಾದ ಶ್ರೀ ಹಿರೇಂದ್ರನಾಥ ಮುಖರ್ಜಿಯವರು ಬರೆದಿದ್ದಾರೆ.

### ಶ್ರೀಮತಿ ಗಾಂಧಿಯ ಕಮ್ಯುನಿಸ್ಟ್ ಮುಖವಾಡ

1950ರ ದಶಕದ ಮಧ್ಯಭಾಗದಲ್ಲಿ ಬಂಡವಾಳ ವಸ್ತುಗಳ ಉತ್ಪಾದನೆ ಆಧರಿತ ಮಹಾಲನೊಬಿಸ್ ಮಾದರಿಯ ಆರ್ಥಿಕ ಬೆಳವಣಿಗೆ ತಂತ್ರಕ್ಕೆ ಸರ್ಕಾರ ನೀಡಿದ ಪ್ರಾಮುಖ್ಯತೆಯಿಂದಾಗಿ ಮಾರ್ಕ್ಸಿಸ್ಟ ವಿರೋಧಿಗಳು ಒಂದು ಮುಖ್ಯ ಟೀಕಾಸ್ತ್ರದಿಂದ ವಂಚಿತರಾದರು. ಮಹಾಲನೋಬಿಸ್ ಮಾದರಿಯ ಆರ್ಥಿಕ ಬೆಳವಣಿಗೆಗೆ ತಂತ್ರವು ಜನಸಾಮಾನ್ಯರ ಅವಶ್ಯಕತೆಗಳನ್ನು ಪೂರೈಸಲು ವಿಫಲವಾದಾಗ, ಅದನ್ನು ಟೀಕಿಸಲು ಬೇಕಾದ ಘೋಷಣೆಗಳನ್ನು ರೂಪಿಸಲು ಸಾಧ್ಯವಾಗದೆ ಮಾರ್ಕ್ಸಿಸ್ಟರು ಗೊಂದಲಕ್ಕೀಡಾದರು. ಅಂತರ ರಾಷ್ಟ್ರೀಯ ಸಾಹಿತ್ಯಕ್ಷೇತ್ರಕ್ಕೆ ಸಂಬಂಧಿಸಿದಂತೆ ಪಂಡಿತ ನೆಹರುರವರು ಸಮಾಜವಾದಿ ದೇಶಗಳ ನೆರವಿನಿಂದ ಕೂಡಿದ ಅಲಿಪ್ತ ನೀತಿಯನ್ನು ರೂಪಿಸಿದ್ದ ಮಾರ್ಕ್ಸಿಸ್ಟರಿಗೆ ಕಾಂಗ್ರೆಸ್ ಮತ್ತು ಸರಕಾರದ ಮೇಲಿನ ಮತ್ತೊಂದು ಟೀಕಾಸ್ತ್ರವು ಕೈತಪ್ಪಿಹೋಯಿತು. ಅಧಿಕಾರದಲ್ಲೇ ಇರಬೇಕು—ಎಂಬ ಏಕೈಕ ಗುರಿ ಮತ್ತು ವಿಚಾರದಿಂದ ಪ್ರೇರಿತರಾದ ಕಾಂಗ್ರೆಸ್ ನಾಯಕರಲ್ಲಿರುವ ಪ್ರಗತಿಪರ ವಿಚಾರಗಳನ್ನು ಶೋಧಿಸುವ ಕೆಲಸ ಮಾತ್ರ ಮಾರ್ಕ್ಸಿಸ್ಟರ ಪಾಲಾಯಿತು. 1920 ರಿಂದ ನಂಬಿಕೊಂಡು ಬಂದಿದ್ದ ಅಂತರ ರಾಷ್ಟ್ರೀಯ ವಿಚಾರಗಳಲ್ಲಿ ಉಂಟಾದ ಗೊಂದಲಗಳು 1960ರ ದಶಕದ ಚೀನಾ-ರಷ್ಯ ಘರ್ಷಣೆ, 1962ರ ಚೀನಾ-ಭಾರತ ಗಡಿ ಘರ್ಷಣೆ, ಚೀನಾ ರಷ್ಯ ಗಡಿತಂಟೆಗಳು ಮತ್ತು 1979ರ ಚೀನಾ-ವಿಯೆಟ್ನಾಂ ಸಮರಗಳಿಂದಾಗಿ ಮತ್ತಷ್ಟು ಗೋಜಲಾದವು.

ಭಾರತದಲ್ಲಿನ ಆರ್ಥಿಕ ನೀತಿಗಳು ಮತ್ತು ಅದನ್ನು ಕಾರ್ಯರೂಪಕ್ಕೆ ತರಬೇಕಾದ ಆಡಳಿತವು ಗುರಿ ಸಾಧಿಸುವುದರಲ್ಲಿ ಅಪಯಶಸ್ಸು ಗಳಿಸಿದುದರಿಂದ ರಾಜಕೀಯ ಪಕ್ಷಗಳ–ಮುಖ್ಯವಾಗಿ ಭಾರತೀಯ ಕಾಂಗ್ರೆಸ್ ಪಕ್ಷದ ಬಗ್ಗೆ ದೇಶ್ಯಾದ್ಯಂತ ಒಂದು ರೀತಿಯ

ಅಸಮಾಧಾನದ ಭಾವನೆ ಉಂಟಾಗಿತ್ತು. 1967ರಲ್ಲಿ ಕಾಂಗ್ರೇಸ್ ಮತದಾರರಿಂದ ಅನುಭವಿಸಿದ ತೀವ್ರತರವಾದ ಉಪೇಕ್ಷೆಯು ಹೊಸ ರಾಜಕೀಯ ತಂತ್ರದ ಉದ್ಭವ ವನ್ನು ಅನಿವಾರ್ಯ ಮಾಡಿತು. ಪಕ್ಷದ ಪ್ರಶ್ನಾತೀತ ನಾಯಕಿಯಾಗಿ ಬೆಳೆಯದೆ ಇದ್ದ ಕಾಲದಲ್ಲಿ, ಹೆಸರಿಗೆ ಮಾತ್ರ ನಾಯಕಿಯಾಗಿದ್ದ ಶ್ರೀಮತಿ ಇಂಧಿರಾಗಾಂಧಿ ಯವರು ಅಂದು ಎದುರಾದ ಸವಾಲನ್ನು ಸಮರ್ಥವಾಗಿ ನಿಭಾಯಿಸಿದ್ದಲ್ಲದೆ ಕ್ರಾಂತಿ ಕಾರಿ ಘೋಷಣೆಗಳ ಪದಪುಂಜಗಳನ್ನು ಸೃಷ್ಟಿಮಾಡುವುದರ ಮೂಲಕ ಸರ್ಕಾರದ ವಿರುದ್ಧ ಮಾರ್ಕ್ಸಿಸ್ಟರಿಗೆ ಇದ್ದ ಇನ್ನೊಂದು ಟೀಕೆಯ ಅವಕಾಶವನ್ನು ಕಿತ್ತುಕೊಂಡರು.

## ನಿರಾಶೆ ತಂದ ಒಡಕು

ಈ ಎಲ್ಲಾ ಕಾರಣಗಳಿಂದ ಮಾರ್ಕ್ಸಿಸ್ಟ್ ಪಕ್ಷಗಳು ಹತಾಶೆಗೊಳಗಾದವು ಮತ್ತು ಪಕ್ಷದೊಳಕ್ಕೆ ಸರ್ಕಾರಿ ಪೊಲೀಸ್ ಏಜೆಂಟರು ನುಸುಳಿಕೊಂಡು ಬಿನ್ನಾಭಿಪ್ರಾಯ ಮತ್ತು ಒಡಕನ್ನು ಅನಿವಾರ್ಯ ಮಾಡಿದರು—ಹೀಗೆ ಪ್ರತ್ಯೇಕಗೊಂಡ ಪ್ರಮುಖ ಗುಂಪಾದ ನಕ್ಸಲೈಟ್‌ಗಳಿಗೆ ಹೊಸ ಘೋಷಣೆಗಳೇ ಸಿಗಲಿಲ್ಲ. ಘೋಷಣೆಗಳ ಅಭಾವ ದಿಂದ ಈ ಪಕ್ಷದಲ್ಲಿ "ಚೀನಾದ ಅಧ್ಯಕ್ಷರೇ ನಮ್ಮ ಅಧ್ಯಕ್ಷರು" ಎಂಬಂತಹ ಬಾಲಿಶ ಘೋಷಣೆ ಹುಟ್ಟಿಕೊಂಡಿತು. ಈ ಘೋಷಣೆ ಬಾಲಿಶವಾಗಿತ್ತು ಏಕೆಂದರೆ ಯಾವ ನಕ್ಸಲೈಟ್‌ಗಳೂ ಇಂದು ಈ ಘೋಷಣೆಯನ್ನು ನೆನಪು ಮಾಡಿಕೊಳ್ಳಲು ಇಷ್ಟಪಡು ವುದಿಲ್ಲ. ರಾಜಕೀಯ ಮಹತ್ವವನ್ನಾಗಲಿ ಮತ್ತು ಜನಸಮೂಹದ ಬೆಂಬಲವನ್ನಾಗಲಿ ಪಡೆಯದೆ ಇದ್ದ ನಕ್ಸಲೈಟ್‌ಗಳು ಭಯೋತ್ಪಾದಕ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳಬೇಕಾಯಿತು. ನಾಗರಿಕ ಸ್ವಾತಂತ್ರ್ಯವನ್ನು ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯ ವನ್ನು ಸರ್ಕಾರ ಹತ್ತಿಕ್ಕಲು ನಕ್ಸಲೈಟ್‌ಗಳ ಉಗ್ರಗಾಮಿ ಭಯೋತ್ಪಾದಕ ಚಟುವಟಿಕೆ ಗಳು ನೆಪವಾಗಿ ಪರಿಣಮಿಸಿದವು.

ಭಾರತೀಯ ಕಮ್ಯುನಿಸ್ಟ್ ಪಕ್ಷದೊಳಗಿದ್ದ ಕಾಂಗ್ರೇಸ್ ಪರವಾದ ನಾಯಕರು ಕಾಂಗ್ರೇಸ್‌ಪಕ್ಷದ ಆಡಳಿತದಮೇಲೆ ಪ್ರಭಾವ ಬೀರುವಲ್ಲಿ ಮತ್ತು ತಮ್ಮ ಪಕ್ಷದ ಕಾರ್ಯಕರ್ತರ ಪಡೆಯನ್ನು ಕಟ್ಟುವಲ್ಲಿ ಅನುಭವಿಸಿದ ಸೋಲಿನಿಂದಾದ ಹತಾಶೆಯ ಪರಿಣಾಮವಾಗಿ ಪಕ್ಷ ಮತ್ತೆ ಎರಡಾಗಿ ಒಡೆಯಿತು. ಶ್ರೀಮತಿ ಗಾಂಧಿಯವರೊಂದಿಗೆ ಕೂಡಿ ನಡೆಸುವ ರಾಜಕೀಯ ತಂತ್ರದಲ್ಲಿ ಬಲವಾದ ನಂಬಿಕೆ ಇಟ್ಟಿರುವ ಶ್ರೀ ಎಸ್. ಎ. ಡಾಂಗೆಯವರ ನಾಯಕತ್ವದಲ್ಲಿ ಅಖಿಲಭಾರತ ಕಮ್ಯುನಿಸ್ಟ್ ಪಕ್ಷವೊಂದು ಹುಟ್ಟಿ ಕೊಂಡಿತು. ಹೀಗೆ ಉಂಟಾದ ಎರಡು ಒಡಕಿನ ಪರಿಣಾಮವಾಗಿ ಇಂದು ಭಾರತ ದಲ್ಲಿ ನಾಲ್ಕು ಕಮ್ಯುನಿಸ್ಟ್ ಪಕ್ಷಗಳು ಅಸ್ತಿತ್ವದಲ್ಲಿವೆ. ಪಶ್ಚಿಮಬಂಗಾಳದಲ್ಲಿ ಅಧಿಕಾರ ದಲ್ಲಿರುವ ಭಾರತೀಯ ಕಮ್ಯುನಿಸ್ಟ್‌ಪಕ್ಷ(ಮಾರ್ಕ್ಸಿಸ್ಟ್), ಕಾಂಗ್ರೇಸ್ ಸಂಬಂಧದಿಂದ ದೂರ ಸರಿದ ಭಾರತೀಯ ಕಮ್ಯುನಿಸ್ಟ್‌ಪಕ್ಷ, ಕಾಂಗ್ರೇಸ್ ಪಕ್ಷದೊಂದಿಗಿನ ಸಂಬಂಧ

ವನ್ನು ಪ್ರತಿಪಾದಿಸುವ ಅಖಿಲಭಾರತ ಕಮ್ಯುನಿಸ್ಟ್ ಪಕ್ಷ ಮತ್ತು ಉಗ್ರಗಾಮಿ ಚಟುವಟಿಕೆಗಳಲ್ಲಿ ನಿರತವಾಗಿರುವ ಹಲವಾರು ಸಣ್ಣ ಗುಂಪುಗಳು.

## ಭಾರತೀಯ ಮಾರ್ಕ್ಸ್‌ವಾದದ ಭೌಗೋಳಿಕ ನಕ್ಷೆ

ಮಾರ್ಕ್ಸ್ ಬಗ್ಗೆ ಉತ್ಸಾಹದಿಂದ ಮಾತನಾಡುವುದು ಉಗ್ರಗಾಮಿತನ ಮತ್ತು ಭಾರತದ ಐಕ್ಯತೆಗೆ ಭಂಗತರುವಂತಹದು ಎಂಬ ಭಾವನೆ ಇದ್ದ 1940 ಮತ್ತು 1950ರ ದಶಕಕ್ಕಿಂತ ಇಂದು ಭಾರತದಲ್ಲಿ ಮಾರ್ಕ್ಸ್ ಹೆಚ್ಚು ಗೌರವಕ್ಕೆ ಪಾತ್ರನಾಗಿದ್ದಾನೆ. ತಮ್ಮ ಅಭಿವೃದ್ಧಿಗೆ ಬೇಕಾದ ಅವಕಾಶಗಳಿಗಾಗಿ ದುರ್ಬಲ ಮತ್ತು ದಲಿತ ವರ್ಗಕ್ಕೆ ಇಂದು ಹೊಸ ವಿಚಾರ ಮತ್ತು ರಾಜಕೀಯ ಆರ್ಥಿಕ ರಚನೆಯಲ್ಲಿ ಬದಲಾವಣೆ ಅವಶ್ಯವಾಗಿದ್ದಾವು. ಕ್ರಾಂತಿಕಾರಿ ಉದ್ದೇಶಗಳನ್ನು ಹೊಂದಿದ್ದ ಮಾರ್ಕ್ಸ್‌ವಾದವು ಸಹಜವಾಗಿ ಕೆಲವೇ ವರ್ಗಗಳಲ್ಲಿ ಮತ್ತು ಕೆಲವೇ ಪ್ರದೇಶಗಳಲ್ಲಿ ರಾಜಕೀಯವಾಗಿ ಪ್ರಭಲ ಶಕ್ತಿಯಾಗಿ ರೂಪುಗೊಂಡಿತು. ಎರಡನೇ ವಿಶ್ವ ಸಮರದ ಕಾಲದಲ್ಲಿ ಬ್ರಿಟಿಷರ ಜೊತೆ ಶಾಮೀಲಾದುದರಿಂದ ತಳ ಕಚ್ಚಿದ್ದ ಕಮ್ಯುನಿಸ್ಟರ ಪ್ರಭಾವ ಬಂಗಾಳಿ ಶಿಕ್ಷಿತ ವರ್ಗದಲ್ಲಿ ಉಂಟಾದ ಅತಿ ಹೆಚ್ಚಿನ ನಿರುದ್ಯೋಗ ಮತ್ತು ಪಶ್ಚಿಮ ಬಂಗಾಳದೊಳಗಾಗಲಿ, ರಾಜ್ಯದ ಹೊರಗೆ ದೇಶದೊಳಗಾಗಲಿ ದುಡಿಮೆಯ ಅವಕಾಶಗಳು ದುರ್ಬಲವಾದ ಪರಿಣಾಮವಾಗಿ ಭಾರತೀಯ ಕಮ್ಯುನಿಸ್ಟ್ ಪಕ್ಷ ಬಲಿಷ್ಠವಾಗಿ ಬೆಳೆಯಿತು. ಅವಿರತವಾಗಿ ನಡೆದ ಬಂಗಾಳಿ ಜನತೆಯ ದಿವಾಳಿತನದ ಪರಿಣಾಮವಾಗಿ ಸಂಘಟಿತ ರಾಜಕೀಯ ಪಕ್ಷದ ಪ್ರತಿನಿಧಿಯಂತಿದ್ದ ರಾಷ್ಟ್ರೀಯ ಕಾಂಗ್ರೆಸ್ ಬಗ್ಗೆ ಜನರಲ್ಲಿ ತಿರಸ್ಕಾರ ಮೂಡಿತು. ಇದರಿಂದ ಸಹಜವಾಗಿ ಜನ ಪಶ್ಚಿಮ ಬಂಗಾಳದಲ್ಲಿ ಕಾರ್ಯತತ್ಪರವಾಗಿದ್ದ ಸಂಘಟಿತ ಪಕ್ಷವಾದ ಭಾರತೀಯ ಕಮ್ಯುನಿಸ್ಟ ಪಕ್ಷಕ್ಕೆ ಬೆಂಬಲಿಗರಾಗಿ ನಿಂತರು. ಕಾಂಗ್ರೆಸ್ ರಾಜಕೀಯದ ಜೊತೆ ಸಂಬಂಧವಿಟ್ಟುಕೊಳ್ಳಬೇಕು ಎಂದು ತೀವ್ರ ವಾದ ಮಾಡುವವರ ಗುಂಪು ಪಕ್ಷದಲ್ಲಿ ಬೆಳೆದುದರಿಂದ ಮತ್ತು ಕಾಂಗ್ರೆಸ್‌ಗೆ ನೀಡುವ ಸಹಕಾರದ ನೀತಿಯನ್ನು ಜನತೆಗೆ ವಿವರಿಸಲು ಸಾಧ್ಯವಾಗದೆ ಹೋದುದರಿಂದ ಪಕ್ಷ ಒಡೆಯಿತು. ಪಕ್ಷ ಒಡೆದಾಗ ಪಶ್ಚಿಮ ಬಂಗಾಳದ ಜನ ಸಹಜವಾಗಿ ಕೇಂದ್ರದಲ್ಲಿ ಆಡಳಿತ ನಡೆಸುತ್ತಿದ್ದ ಕಾಂಗ್ರೆಸ್ ಜೊತೆಗಿನ ಸಂಬಂಧವನ್ನು ವಿರೋಧಿಸಿದ ಗುಂಪಿನ ಜೊತೆ ಉಳಿಯಿತು.

## ಮಾರ್ಕ್ಸಿಸ್ಟರ ಪ್ರಭಾವ ಮತ್ತು ಅವನತಿ

ಭಾರತದಲ್ಲಿ ಮಾರ್ಕ್ಸ್‌ವಾದ ಕುರಿತು ಚರ್ಚೆಯು ಅದರ ಭೌಗೋಳಿಕ ವ್ಯಾಪಕತೆಯನ್ನು ವಿವರಿಸದಿದ್ದರೆ ಪೂರ್ಣವಾಗುವುದಿಲ್ಲ. ದಾರಿದ್ರ್ಯ ಮತ್ತು ಅವನತಿ ತೀವ್ರವಾಗಿರುವ ಪ್ರದೇಶಗಳೇ ಮಾರ್ಕ್ಸ್‌ವಾದ ವ್ಯಾಪಕವಾಗಿ ನೆಲೆಯೂರಿರುವ ಪ್ರದೇಶಗಳಾಗಿವೆ. ಮಾರ್ಕ್ಸ್‌ವಾದದ ಪ್ರಭಾವ ವಿಭಜನೆ ಪೂರ್ವದ ಬಂಗಾಳದಲ್ಲಿ ಮತ್ತು ವಿಭಜನೆ

ನಂತರದ ಪಶ್ಚಿಮ ಬಂಗಾಳ ರಾಜ್ಯದಲ್ಲಿ ಆದಷ್ಟು ಬೇರಾವ ರಾಜ್ಯದಲ್ಲೂ ಆಗಿಲ್ಲ. ಪಶ್ಚಿಮ ಬಂಗಾಳವು ಸ್ವಾತಂತ್ರ್ಯದ ನಂತರ ನಿರಂತರವಾಗಿ ಅವನತಿಯ ಜಾಡಿನಲ್ಲೇ ಜಾರುತ್ತ ಸಾಗಿದೆ. ಈ ಅವನತಿಯ ಪ್ರವೃತ್ತಿಯಲ್ಲಿ ಸ್ವಲ್ಪವೂ ಬದಲಾವಣೆ ಸಂಭವಿಸಿಲ್ಲ.

ಈ ಅವನತಿಗೆ ಮಾರ್ಕ್ಸ್‌ವಾದ ಕಾರಣ ಎಂಬುದು ನನ್ನ ವಾದವಲ್ಲ. ಮಾರ್ಕ್ಸ್‌ವಾದದ ಪ್ರಭಾವವಿರುವ ಪ್ರದೇಶ ಮತ್ತು ಅವನತಿ ಸಂಭವಿಸುತ್ತಿರುವ ಪ್ರದೇಶ ಕಾಕತಾಳೀಯವಾಗಿ ಒಂದೇ ಆಗಿವೆ ಎಂಬುದನ್ನು ದಾಖಲಿಸುವುದಷ್ಟೇ ನನ್ನ ಉದ್ದೇಶ ಇದಕ್ಕೆ ವ್ಯತಿರಿಕ್ತವಾಗಿ ಮಾರ್ಕ್ಸ್‌ವಾದ ರಾಜಕೀಯ ಶಕ್ತಿಯಾಗಿ ಪ್ರಬಲವಾಗಿ ಬೆಳೆಯದೇ ಇರುವ ರಾಜ್ಯಗಳಾದ ಮಹಾರಾಷ್ಟ್ರ, ಗುಜರಾತ್ ಮತ್ತು ಪಂಜಾಬ್ ರಾಜ್ಯಗಳು ಇದೇ ಅವಧಿಯಲ್ಲಿ ಗಣನೀಯ ಬೆಳವಣಿಗೆಯನ್ನು ಕಂಡಿವೆ. ತುಂಬಾ ಸಾಮಾನ್ಯೀಕರಿಸಿದ ಸಾಪೇಕ್ಷ ತೀರ್ಮಾನ ದೇಶದಲ್ಲಿ ಅರ್ಧದಷ್ಟು ಜನ ಬಡತನದ ರೇಖೆಯಿಂದ ಕೆಳಗೆ ಜೀವಿಸುತ್ತಿರುವಾಗ, ಆತ್ಮಸಾಕ್ಷಿಯಿರುವ ಯಾರೂ ಬೆಳವಣಿಗೆ ಬಗ್ಗೆ ಮಾತನಾಡಲು ಸಾಧ್ಯವಿಲ್ಲ. ಬಂಗಾಳದ ಅವನತಿಯು ತುಂಬಾ ವಿಶಿಷ್ಟವಾದುದು, ಏಕೆಂದರೆ ಸಾತಂತ್ರ್ಯ ಬಂದ ಸಮಯದಲ್ಲಿ ಆ ರಾಜ್ಯ ಒಂದಕ್ಕಿಂತ ಹೆಚ್ಚು ಕ್ಷೇತ್ರಗಳಲ್ಲಿ ಪ್ರಥಮ ಸ್ಥಾನದಲ್ಲಿತ್ತು ಪಶ್ಚಿಮ ಬಂಗಾಳದ ಈ ವಿಶಿಷ್ಟ ಪರಿಸ್ಥಿತಿಯ ಅಧ್ಯಯನದಿಂದ ಭಾರತದಲ್ಲಿ ಮಾರ್ಕ್ಸ್‌ವಾದಕ್ಕೆ ಒದಗಿರುವ ಸ್ಥಿತಿಯ ಬಗ್ಗೆ ನಿಜಾಂಶ ಹೊರಬೀಳಬಹುದು.

**—ಟಿ. ಆರ್. ಚಂದ್ರಶೇಖರ್**

ದೀಪವಿಲ್ಲ-ಹೂವಿಲ್ಲ
ಕೋಗಿಲೆಯಿಲ್ಲ ಹಾಡಿಲ್ಲ
ಮಿಂಚುಹುಳದ ಬೆಳಕಿಲ್ಲ
ಬಡವರ ಗೋರಿಯ ಮೇಲೆ

[ಲಾಹೋರಿನಲ್ಲಿರುವ ರಾಣಿ ನೂರ್‌ಜಹಾನಳ ಗೋರಿಗಲ್ಲಿನ ಮೇಲೆ ಕೆತ್ತಿದ ಹಾಡು]

# ಎಂ. ಟಿ. ವಿ. ಜೊತೆ ನಾಲ್ಕು ತಾಸು

—ಹು. ಲ. ನಟರಾಜು

ನಮಗೆ ಸಹಜವಾಗಿಯೇ ಕುತೂಹಲವಿತ್ತು: ನಮ್ಮ ಮುಖ್ಯ ನವ್ಯ ಲೇಖಕರಷ್ಟೇ ಮಹತ್ವದ ಬರಹಗಾರನಾಗಿಯೂ ನಮ್ಮ ನವ್ಯರೆಲ್ಲ ಬೆರಳೆಣಿಕೆಯಷ್ಟು ಮಂದಿಗೆ ಗೊತ್ತಿದ್ದ ಸಂದರ್ಭದಲ್ಲಿ ಕೇರಳದುದ್ದಕ್ಕೂ ಜನಪ್ರಿಯನಾಗಿದ್ದ ಈ ವ್ಯಕ್ತಿಯ ಬಗೆಗೆ ನಾವು ಬೆರಗುಗೊಳ್ಳಲು ಕಾರಣವಿತ್ತು. ಕಲ್ಲೀಕೋಟೆ ಹೋಟೆಲುಗಳಲ್ಲಿ, ಕೆಲವು ಪೆಟ್ಟಿಗೆ ಅಂಗಡಿಗಳಲ್ಲಿ ಕೂಡ 'ಎಂ.ಟಿ.' ಗೊತ್ತು. ಹೀಗೆ ಓದು ಬರಹ ಬಲ್ಲ ನಮ್ಮ ಪಕ್ಕದ ಕೇರಳೀಯರಿಗೆ ಗೊತ್ತಿರುವ ಮತ್ತೊಂದು ಹೆಸರು ಮಲೆಯಾಳಂ ಭಾಷೆಯ ಅತ್ಯಂತ ಮಹತ್ವದ ಬರಹಗಾರ ವೈಕಂಮುಹಮದ್ ಬಷೀರ್ ಮಾತ್ರ. ಎಂ.ಟಿ. ವಾಸುದೇವನ್ ನಾಯರ್ ಅವರ ಈ ಜನಪ್ರಿಯತೆಗೆ ಚಿತ್ರಜಗತ್ತಿನ ಗ್ಲಾಮರ್ ಸ್ಪರ್ಶವೂ ಒಂದು ಕಾರಣವಿರಬಹುದು. ಆದರೂ ಈತ ಕಥೆಗಾರನಾಗಿ ಕೂಡ ಅಲ್ಲಿನ ಬಹುತೇಕರಿಗೆ ಪರಿಚಯವಿತ್ತು.

ಸದಾ ಊರೂರು ಸುತ್ತುವ ಎಂ. ಟಿ. ನಮ್ಮ ಕೈಗೆ ಸಿಕ್ಕುವ ಬಗೆಗೆ ಅನುಮಾನ ಹೊತ್ತೇ ಡಯಲ್ ತಿರುಗಿಸಿದರೆ, ಸಾಕ್ಷಾತ್ ನಾಯರ್ ಕಂಠವೇ!

"you may come at any time!"

ಎಂದು ಆಹ್ವಾನಿಸಿದ ಕಂಠ ಕೇಳಿ ಆಸಾಮಿ ಲೈನಿನಲ್ಲಿರಬಹುದೇ (ಎಂ.ಟಿ. ಕುಡಿಯುವುದು ಬಿಟ್ಟಿದ್ದಾರೆ ಅಂತ ನಂತರ ತಿಳಿಯಿತು) ಎಂಬ ಗುಮಾನಿಯೊಂದಿಗೇ ನಾವು. ನಾನು ಮತ್ತು ಲೇಖಕ ಕಾಳೇಗೌಡ ನಾಗವಾರ—ಬ್ರಿಟಿಷ್ ದಿನಗಳ ಸೊಗಡನ್ನು ಇನ್ನೂ ಉಳಿಸಿಕೊಂಡ ಕಲ್ಲೀಕೋಟೆಯ ಐತಿಹಾಸಿಕ ಓಣಿಗಳಲ್ಲಿ ಸುತ್ತುತ್ತಾ, ಬೆನ್ನ ಮೇಲೆ ಕೂದಲು ಹರವಿಕೊಂಡು ಅಡ್ಡಾಡುವ ಸುಂದರ ಸ್ತ್ರೀ ಮಲೆಯಾಳ ನಾಡಿನ ಕೋಮಲೆಯರನ್ನು ಕಣ್ಣಲ್ಲಿ ತುಂಬಿಕೊಳ್ಳುತ್ತಾ, ನಮಗೆ ಗೊತ್ತಿದ್ದ ಹರಕು ಮುರುಕು ಹಿಂದಿ, ತಮಿಳು, ಮಲೆಯಾಳಂ ಎಲ್ಲ ಖರ್ಚುಮಾಡಿ (ನಮ್ಮ ದುರಾದೃಷ್ಟಕ್ಕೆ 'ಎಂ.ಟಿ.' ಈ ಆಟೋವಾಲಾಗೆ ಗೊತ್ತಿಲ್ಲ!) ಅಂತೂ ಕೊನೆಗೊಮ್ಮೆ 'ಸಿತಾರಾ' ಎಂಬ,ಹೆದರಿಸುವ ನಾಯಿಗಳೇನೂ ಇಲ್ಲದ, ಸುಂದರ ಬಂಗಲೆ ತಲುಪಿದಾಗ ಗಡಿಯಾರದ ಮುಳ್ಳು ನಾಲ್ಕಕ್ಕೆ ಮುತ್ತಿಕ್ಕುತ್ತಿತ್ತು...

ಥೇಟ್ ಮಲೆಯಾಳಿ ಬಾಂಧವನ ಹಾಗೆ ಬಿಳಿ ಲುಂಗಿ ಉಟ್ಟು ತುಂಡು ಪರಟೇರಿಸಿ ಕದ ತೆಗೆದ ಗಂಭೀರ ವ್ಯಕ್ತಿಯೇ ಎಂ.ಟಿ. ವಾಸುದೇವನ್ ನಾಯರ್ ಅಂತ ಪತ್ತೆ ಹಚ್ಚುವುದು ತಡವಾಗಲಿಲ್ಲ.

ನಾವು ಹೋಗಿದ್ದ ಉದ್ದೇಶ ಶುಷ್ಕ ಯಾಂತ್ರಿಕ ಸಂದರ್ಶನದ್ದಾಗಿರಲಿಲ್ಲ. ಹೀಗಾಗಿ ಇಡೀ ಮಾತು-ಕತೆ ಒಂದು ಬಗೆಯ ಆತ್ಮೀಯ ಚರ್ಚೆಯ ಮಾದರಿಯಲ್ಲೇ ನಡೆದದ್ದು. ಕೇರಳದ ಪ್ರಮುಖ ಬರಹಗಾರನ ನಿಲುವುಗಳನ್ನು ದಾಖಲಿಸುವ ಪ್ರಯತ್ನದ ಈ ನಮ್ಮ ಮಾತು–ಕತೆ, ವಿನಿಮಯ ಇವೆಲ್ಲ ಒಂದು ನಮೂನೆಯ 'ಇಂಗ್ಲೀಷಿ' ನಲ್ಲೆ ನಡೆಯಿತೆಂಬುದನ್ನು ಇಲ್ಲಿ ಕಾಣಿಸುವ ಅಗತ್ಯವಿಲ್ಲ!

ಸಾಮಾನ್ಯವಾದ ಬೀಡಿಯ ಕಟ್ಟೊಂದನ್ನು ಬದಿಗಿರಿಸಿ ಒಂದರ ಮೇಲೊಂದರಂತೆ ಹಚ್ಚುತ್ತಾ ಎಂ.ಟಿ. ಅಖಾಡಕ್ಕಿಳಿದರು. ಸಾಹಿತ್ಯಲೋಕ ಪ್ರವೇಶಿಸಿದ ದಿನಗಳಿಂದ, ಸಂಪಾದಕನಾಗಿ ಪತ್ರಿಕೆ ಸೇರಿದ ಆರಂಭದ ದಿನಗಳಿಂದಲೇ ಮಾತು ಶುರುವಾಯಿತು.

'ಮಾತೃಭೂಮಿ' ಎಂಬ ಅಪ್ಪಟ ಸಾಹಿತ್ಯಕ ಪತ್ರಿಕೆಯನ್ನು ಹುಟ್ಟುಹಾಕಿದ್ದು ಎಂ.ಟಿ.ಯೇ. ಗಮನಾರ್ಹ ಸಂಗತಿಯೆಂದರೆ ಬರೇ ಸಾಹಿತ್ಯಕ್ಕೆ ಮೀಸಲಾಗಿದ್ದ ಈ ಪತ್ರಿಕೆ ಕೇರಳದಲ್ಲಿ ಒಂದು ಲಕ್ಷ ಪ್ರಸಾರ ದಾಟಿದ್ದು. ಮಲೆಯಾಳಂ ಸಾಹಿತ್ಯದ ಹೊಸ ಹೆಜ್ಜೆ, ಹೊಸ ಪ್ರತಿಭೆ ಇವೆಲ್ಲ ಗುರ್ತಿಸಿ, ಹೊಸ ಓದುಗರನ್ನು ಬೆಳೆಸಿದ್ದರಲ್ಲಿ, ಕೇರಳದ ಓದುಗನ 'correction of taste' ನಲ್ಲಿ ಎಂ.ಟಿ.ಯ ಪಾತ್ರ ಮಹತ್ವದ್ದು ಆದರೆ,

"ಬರೇ ಸಾಹಿತ್ಯಕ್ಕೆ ಮೀಸಲಾದ ಈ ಪತ್ರಿಕೆಯನ್ನು 'ಜನಪ್ರಿಯ' ವಾಗಿಸಲು ಸಾಹಿತ್ಯಕ ಮೌಲ್ಯಕಡಿಮೆ ಮಾಡಿ 'ಕಮರ್ಷಿಯಲ್' ಮಾಡಲು ಮೇಲಿಂದ ಒತ್ತಾಯಾ ಶುರುವಾದಾಗ ರಾಜೀನಾಮೆ ಇಕ್ಕಿ ಹೊರಬಿದ್ದೆ", ಎಂದು ಹೇಳುವ ನಾಯರ್‌ಗೆ ಈಗಲೂ ಆ ಬಗ್ಗೆ ಕೊಂಚ ನೋವಿದ್ದ ಹಾಗಿದೆ.

"ಆದರೆ ಈ 'ಕಮರ್ಷಿಯಲ್' 'ಕಲಾತ್ಮಕ' ಪ್ರಶ್ನೆ ಬಂದಾಗ 'ಎಂ.ಟಿ.' ಸಿನಿಮಾಕ್ಕೆ ಬರೆಯುವ ಲೇಖಕ ಕೂಡ ಆಗಿರುವುದರಿಂದ ಅಲ್ಲಿ ಭಯ ಕಾಡುವುದಿಲ್ಲವೆ? ರಾಜಿ ಮಾಡಿಕೊಳ್ಳಲೇಬೇಕಾಗುತ್ತಲ್ಲ?" ಎಂಬ ನಮ್ಮ ಅನುಮಾನಕ್ಕೆ ಗೆರೆ ಕೊಯ್ದ ಹಾಗೆ ಹೇಳಿ ಬಿಟ್ಟರು:

"ರಾಜಿ-ಗೀಜಿಯ ಮಾತೇ ಇಲ್ಲ. ಎಲ್ಲ ಕೊನದಿಂದಲೂ ನನ್ನ ಕಥೆಗೆ ನನ್ನ ನಿಲುವಿಗೆ ಒಪ್ಪಿದಾಗ ಮಾತ್ರ ಸಿನಿಮಾಕ್ಕೆ ಕಥೆ ಕೊಟ್ಟೇನು. ಅವರ ಮೂಗಿನ ನೇರಕ್ಕೆ ತಿದ್ದುವ ಮಾತೇ ಇಲ್ಲ. ಬೇಕಾದರೆ ಮಾಡಲಿ ಇಲ್ಲದಿದ್ದರೆ ಬೇಡ."

"ಆದರೆ ಐ. ವಿ. ಶಶಿಯಂಥ ಲೈಂಗಿಕ ಚಿತ್ರಗಳ ನಿರ್ದೇಶಕ ನಿಮ್ಮ ಕಥೆಗಾಗಿ ಬಂದಾಗ ?"

"ಕೆಟ್ಟ ಚಿತ್ರಗಳನ್ನು ಮಾಡಿ ಬೇಸತ್ತ ಶಶಿ ನನ್ನ ಬಳಿಬಂದಾಗ ನನ್ನ ಕಥೆಕೊಟ್ಟೆ. ಆತನಿಗೂ ಒಳ್ಳೆಯ ಚಿತ್ರ ಮಾಡುವ ಹಂಬಲ ಬಂದಿದ್ದರಿಂದ ನನ್ನ ಕಥೆಯಲ್ಲಿ ಒಂದಿಷ್ಟು ಬದಲಾವಣೆಕೂಡದೆಂದು ಶಶಿಗೆ ನಿಖರವಾಗಿ ಹೇಳಿದ್ದೆ. ಹಾಗೆ ನೋಡಿದರೆ ಇದೆ ಶಶಿಯ ಅತ್ಯುತ್ತಮ ಚಿತ್ರ.

ಸಂತೆ ಹೊತ್ತಿಗೆ ಮೂರು ಮೊಳ ನೇಯುವ ಸಿನಿಮಾ ಸಾಹಿತ್ಯ ಫ್ಯಾಕ್ಟರಿಗಳು ಇದನ್ನು ಕೇಳಿ ನಕ್ಕರೆ ನಗಲಿ, ಆದರೆ ಗಟ್ಟಿಯಾಗಿ ಬರೆಯುತ್ತಿದ್ದು, ಆ ಬಳಿಕ ಸಿನಿಮಾಗುಂಗಿನಲ್ಲಿ ಅರೆ ಬರೆ ತೋಪಾದ ನಮ್ಮ ಕೆಲವು ಬರಹಗಾರರು ಎಂ.ಟಿ.ಯ ಈ ಮೊಂಡುತನ ನೋಡಿಯಾದರೂ ಒಂದಿಷ್ಟು ಕಲಿಯದಿದ್ದರೆ ಪೂರಾ ನೆಲ ಹಿಡಿ ಯುವ ಭಯವಂತೂ ಇದೆ.

ಸಿನಿಮಾಕೆ ಬರೆದು ಕೂಡ ತನ್ನೊಳಗಿನ ಲೇಖಕನನ್ನು ಉಳಿಸಿಕೊಳ್ಳ ಬಯಸು ವಾತ ಸದಾ ತನ್ನ ಬರವಣಿಗೆಯ ಬಗೆಗೆ ಎಚ್ಚರದ ಕಣ್ಣೊಂದನ್ನು ಇಟ್ಟಿರಲೇ ಬೇಕು ಎನ್ನುವ ಎಂ.ಟಿ. ಇನ್ನೂ ಉಳಿದುಕೊಂಡಿರುವುದು ಈ ಪ್ರಜ್ಞೆಯಿಂದಾಗಿಯೇ. ಹಾಗೆ ಕನ್ನಡದಲ್ಲಿ ಉಳಿದುಕೊಂಡಿರುವ ಲೇಖಕ ಲಂಕೇಶ್ ಮಾತ್ರ.

ಎಂ.ಟಿ.ಯ 'ನಿರ್ಮಾಲ್ಯಂ' ಮುಂತಾದ ಚಿತ್ರಗಳೆಲ್ಲ ರಾಜ್ಯ-ರಾಷ್ಟ್ರ ಪ್ರಶಸ್ತಿ ಗಳಿಸಿದ್ದೆಲ್ಲ ಈಗ ಹಳೆಯಮಾತು. ಸಿನಿಮಾ ಜಗತ್ತಿನ ಬಗೆಗಿನ ಕೊರತೆ ಕೈಬಿಟ್ಟು (ಸಿನಿಮಾದ ಬಗೆಗೆ ನಮ್ಮ 'ಸರಕು' ಕೂಡಾ ತೀರಾ ಕಮ್ಮಿಯಿತ್ತು!) ಸಾಹಿತ್ಯಕ್ಕೆ ತಿರುಗಿಬಿಟ್ಟೆವು.

ಮಲೆಯಾಳಂ ಸಾಹಿತ್ಯಕ್ಕೆ ಆಂಗ್ಲ ಸಾಹಿತ್ಯದ ಪ್ರಭಾವದಿಂದ ಹಾಗೂ ಸ್ವಾತಂತ್ರ್ಯನಂತರ ರೂಪುಗೊಂಡ ಹೊಸ ಬಗೆಯ ಆಲೋಚನೆಗಳಿಂದ—'ನವ್ಯ' ಬರವಣಿಗೆಯ ಪರಿಚಯ ಮಾಡಿಸಿದವರು ಎಂ.ಟಿ. ಆ 'ಪ್ರಯೋಗ'ದ ಬಗೆಗೆ ನಾವು ಕೇಳಿದಾಗ ಅವರು ಹೇಳಿದ್ದು ನಿಜಕ್ಕೂ ಗಮನಾರ್ಹವಾಗಿತ್ತು:

"ನಾನು ಪ್ರಯೋಗ ಶುರುಮಾಡಿದ್ದು ಬರೇ ಪ್ರಯೋಗದ ಕಾರಣಕ್ಕಾಗಿಯಲ್ಲ ಬರೆಯುವ 'urge' ಒಳಗಿಂದ ಬಂದಾಗ ನಾನು ಆ ದಿಕ್ಕಿನಲ್ಲಿ ಹೋದೆ"

"ಆದರೆ ಈ 'ನವ್ಯ' ಬಹುತೇಕ ಬೌದ್ಧಿಕ ಕಸರತ್ತಾದಾಗ....?

"ಇಲ್ಲ, ನನ್ನ ಮಟ್ಟಿಗೆ ಹಾಗಗಲಿಲ್ಲ. ನಾನು ಹೇಳುವುದು ಓದುಗನ ಎದೆಗೆ ಮುಟ್ಟಬೇಕು. ಬರೇ ವಿಚಾರವನ್ನ ಹೇರುವದಾದರೆ ಕಾದಂಬರಿ ಬರೆಯುವ ಅಗತ್ಯವೇ ಇಲ್ಲ. ಹೇಳಬೇಕಾದ್ದನ್ನು ಲೇಖನದ ಮೂಲಕ ಹೇಳಿಬಿಡಬಹುದಲ್ಲ? ಸಾರ್ತ್ರೆಯನ್ನೇ ನೋಡಿ: ಆತನ ಕಾದಂಬರಿಗಳನ್ನು ನಾವು 'ಎಂಜಾಯ್' ಮಾಡಲಾಗುವುದಿಲ್ಲ ಸಾಹಿತ್ಯವಾಗಿ..."

ಓದುಗನನ್ನು ಎಂದೂ 'ಕೇರ್' ಮಾಡದೆ ದುರಹಂಕಾರದ ಮೊಟ್ಟೆಗಳಂತಿದ್ದ ನಮ್ಮ ಕೆಲವು 'ನವ್ಯ'ರು ಥಟ್ಟಂತ ನನ್ನ ಕಣ್ಣೆದುರು ಹಾಯ್ದು ಹೋದರು. ಆದರೆ "ನವ್ಯ ಬರೇ ಲೇಬಲ್ಲಲ್ಲ, ಅಂದೊಂದು ಸ್ಪಿರಿಟ್, Vibration of Spirit" ಎನ್ನುವ ಎಂ.ಟಿ. ಮಾತ್ರ ಎಲ್ಲ ನವ್ಯರ ಹಾಗೇ ಗಿಳಿಪಾಟ ಒಪ್ಪಿಸುತ್ತಿದ್ದರು...

ಸಾಮಾನ್ಯ ಓದುಗನನ್ನು ತಲುಪಿಯೂ ಅತ್ಯಂತ ಸಂಕೀರ್ಣವಾದ ಬರವಣಿಗೆಯನ್ನು ಈತ ಕಾಯ್ದುಕೊಂಡದ್ದರಬಗೆಗೆ ನಾವು ಕಂಡ ಕೇರಳದ ಬಹುತೇಕ ಬರಹಗಾರರಲ್ಲಿ ಏಕಾಭಿಪ್ರಾಯವಿತ್ತು. "ಆದರೆ ಆತ ನಮ್ಮ ಮಹತ್ವದ ಸಣ್ಣ ಕಥೆಗಾರ: ಕಾದಂಬರಿಕಾರನಾಗಿ ಅಷ್ಟೊಂದು ಯಶಸ್ವಿಯಲ್ಲ" ಎಂಬ ಅಭಿಪ್ರಾಯದಲ್ಲಿ ಕೂಡ ಭಿನ್ನಮತವಿರಲಿಲ್ಲ. ತುಂಬ 'ಲಿರಿಕಲ್' ಆಗಿ ಬರೆಯುವ ಎಂ.ಟಿ. ಯ "ಮಂಜು" ಇಂಡಿಯಾದ ಭಾಷೆಗಳ ಅತ್ಯುತ್ತಮ ಸಣ್ಣಕಥೆಗಳಲ್ಲೊಂದು.

"ಕಾದಂಬರಿ ಬರೆದಾಗಲೆಲ್ಲ ಅವರು ಸೋಲುತ್ತಾರೆ. ತನ್ನ ಅನುಭವಕ್ಕೆ ಹೊರತಾದ್ದನ್ನು ಬರೆದಾಗಲೆಲ್ಲ ಅವರು failure. ತಾನು ಬರೆಯುವ ಕಥೆಯಲ್ಲಿ ಪೂರ್ತಿ 'Invove' ಆಗಿ ಮಾತ್ರ ಯಶಸ್ವಿಯಾಗ ಬಲ್ಲ ಬರಹಗಾರ ಎಂ.ಟಿ. ತಮ್ಮ ಅನುಭವದ ಬಗೆಗೆ ಬರೆದಾಗ ಮಾತ್ರ ಆತ ಗಟ್ಟಿಯಾಗಿ ಕಾಣವುದು", ಎಂದು ಮಲೆಯಾಳಂ ಭಾಷೆಯ ಇನ್ನೊಬ್ಬ ಗಮನಾರ್ಹ ಕಾದಂಬರಿಕಾರ 'ವಿಲಾಸಿನಿ' (ಈಚೆಗೆ ನಾಲ್ಕುಸಾವಿರಪುಟಗಳಷ್ಟು ಸುದೀರ್ಘ ಕಾದಂಬರಿ ಬರೆದು ದಾಖಲೆ ಮಾಡಿರುವಾತ) ಎಂ. ಟಿ. ಯನ್ನು ತೂಗಿದರು.

ಆದರೆ ತಮ್ಮ ಕಾದಂಬರಿ "ಅಸುರವಿತ್ತು" ಬಗೆಗೆ ಸ್ವತಃ ನಾಯರ್‌ಗೇ ತುಂಬ ಪ್ರೀತಿ ಇದ್ದಂತಿತ್ತು. ಈ ಮಧ್ಯೆ, ಬರಲಿರುವ ತಮ್ಮ ಮಹತ್ವದ ಕಾದಂಬರಿ "ಎರಡನೆಯ ಅವಕಾಶ"ದ ಮಾತು ಇಲ್ಲಿ ಬಂದಾಗ ನಾಯರ್ ಕಣ್ಣು ಕನ್ನಡಕದೊಳಗಿಂದ ಫಳಫಳ ಹೊಳೆಯ ತೊಡಗಿದವು.

ಎಂ. ಟಿ.ಯನ್ನು ಈ ಕೆಲವು ವರ್ಷಗಳಿಂದ ಭೀಮ ಕಾಡುತ್ತಿದ್ದಾನೆ. ಅವರ ತಲೆ ಕೊರೆದ ಮಹಾಭಾರತದ ಭೀಮನನ್ನು ಕುರಿತು ತಾವು ನಡೆಸಿದ ಸವಿಸ್ತಾರ

ಅಧ್ಯಯನ, ಸಂಶೋಧನೆಯ ಬಗೆಗೆ ಹೇಳುತ್ತಾ ಹೋದರು. ಒಂದು ಬಗೆಯ ಎಡದೃಷ್ಟಿಕೋನದಿಂದ ಭೀಮನನ್ನು ನೋಡುವ ಈ ಲೇಖಕನ ಬಗೆಗೆ ನಿಜಕ್ಕೂ ಹೆಮ್ಮೆ ಪಟ್ಟುಕೊಳ್ಳುವಂತಾಗಿದ್ದು ಇಲ್ಲಿಯೇ. ನಾಯರ್ ಹೇಳಿದರು:

"ಇಡೀ ಭಾರತದ ಏಕಮಾತ್ರ 'Man' ಭೀಮನೇ. ಆದರೆ ನಮ್ಮ ಪುರಾಣ ಕರ್ತರೆಲ್ಲ ಅವನನ್ನು 'comic figure' ಆಗಿ ಚಿತ್ರಿಸಿದ್ದೊಂದು ವಿಪರ್ಯಾಸ. ಕೌರವರನ್ನೆಲ್ಲ ಕೊಂದ ಈ "ಗಂಡಿಗೆ" ಅರ್ಹ ಸ್ಥಾನ ಸಿಗದೆ ಸದಾ 'ಬುದ್ಧಿ'ಯ ಕೈ ಮೇಲಾಗಿ ನಿಜವಾದ 'ದುಡಿಮೆ'ಗೆ ಸ್ಥಾನ ದಕ್ಕದೆ ಸದಾ 'ಎರಡನೇಅವಕಾಶ' ಸಿಕ್ಕಿದ್ದು ಎಂಥ ದುರಂತ ಅಲ್ಲವಾ?

ಇಲ್ಲಿ ನಾಯರ್‌ರ 'ಶೂದ್ರಪ್ರಜ್ಞೆ' ಪ್ರಖರವಾಗಿ ಕೆಲಸಮಾಡಿದ್ದಂತಿತ್ತು. ಈ ನಿಲುವಿಗೆ ಮಾತೃಪ್ರಧಾನ ಹಾಗು ಪಿತೃಪ್ರಧಾನ ಕುಟುಂಬದ ವ್ಯವಸ್ಥೆಗಳ ನಂಬೂದರಿ–ನಾಯರ್ ಮೊದಲಾದ ಕೇರಳದ ಸಾಮಾಜಿಕ ಹಿನ್ನೆಲೆ, ಶೂದ್ರರ ಮೈಯ ಇಡೀ ದುಡಿಮೆಯನ್ನು ಕಡೆಗಣಿಸಿ ಒಣಬೌದ್ಧಿಕತೆಯನ್ನು ವೈಭವೀಕರಿಸಿ ಈ ಸ್ಥಿತಿಗೆ ಬಂದ ಇಂಡಿಯಾದ 'ಸಂಸ್ಕೃತಿ'ಯ ವೈಪರೀತ್ಯಗಳು ಕೂಡ ತುಂಬ ಕೆಲಸ ಮಾಡಿದ ಹಾಗೆ ಕಾಣುತ್ತಿದ್ದವು. ಅವೆಲ್ಲ ಎಷ್ಟರ ಮಟ್ಟಿಗೆ ಈತನ ಹೊಸ ಕಾದಂಬರಿಯಲ್ಲಿ ರೂಪುಗೊಂಡಿವೆ ಎಂಬುದನ್ನು ಕಾದಂಬರಿಯೇ ಹೇಳಬೇಕು. ಕಾದಂಬರಿ ಇಂಗ್ಲೀಷಿಗೆ ಕೂಡ ಬರಲಿದೆ...

ಈ ನಡುವೆ ನಮ್ಮ ನಾಗವಾರ ಮಹಾಭಾರತದ ಸಮಕಾಲೀನ interpretation ಬಗ್ಗೆ, ಇರಾವತಿಕರ್ವೆ, ಭೈರಪ್ಪನವರ 'ಪರ್ವ' ಇವೆಲ್ಲ ವಿವರಿಸುತ್ತಿದ್ದರು. ಕುಮಾರವ್ಯಾಸನ ಭೀಮನು ದ್ರೌಪತಿ ವಸ್ತ್ರಾಪಹರಣದ ಸಂದರ್ಭದಲ್ಲಿ ಸಿಟ್ಟಿನಿಂದ ಅಣ್ಣನ ಆಜ್ಞೆಯನ್ನು ದಾಟಿ, ಸಹದೇವನನ್ನು ಕರೆದು "ಅಗ್ನಿಯ ತಾ, ಯುಧಿಷ್ಠಿರನೃಪನ ತೋಳುಗಳ ಮಂದಿ ನೋಡಲು ಸುಡುವೆನೇಳೇಳ್" ಎಂದು ಗರ್ಜಿಸುವ ಸಂಬಂಧದ ಕೆಲವು ಪದ್ಯಗಳನ್ನು ಮೂಲದಲ್ಲಿ ಹೇಳಿ ಅದನ್ನೆಲ್ಲ ಮತ್ತೆ ಇಂಗ್ಲೀಷಿಗೆ ತರಲು ಹೆಣಗಿ ನಮ್ಮ ಪಜೀತಿ ಕಂಡ ನಾಯರ್ ತಮಗೆ ಅದು ಅರ್ಥವಾಗಿದೆ ಎಂದು ನಮ್ಮನ್ನು ಬಿಡುಗಡೆ ಮಾಡಿದರು! ಸಂಸ್ಕೃತ ಮಿಶ್ರಿತ ನಡುಗನ್ನಡ ದ್ರಾವಿಡ ಸೋದರ ಮಲೆಯಾಳಿಗೆ ಅರ್ಥವಾಗುವ ಎಲ್ಲ ಸಾಧ್ಯತೆಗಳೂ ಇದ್ದವೆನ್ನಿ. ಆದರೂ ಇವೆಲ್ಲ ತಾಪತ್ರಯ ಬೇಡವೆಂದು ಪುರಾಣ ಕೈಬಿಟ್ಟು ಕಲಿಯುಗಕ್ಕೆ ತಿರುಗಿದೆವು....

ನಮ್ಮ ಮಟ್ಟಿಗೆ ತುಂಬ ಮಹತ್ವದ ಪ್ರಶ್ನೆಯಾದ ಸಾಹಿತಿಯೊಬ್ಬನ ಸಾಮಾಜಿಕ ಜವಾಬ್ದಾರಿ ಮತ್ತು ಕನ್ನಡ ಸಾಹಿತ್ಯದ ಇತ್ತೀಚಿನ ಪ್ರಮುಖ ಪ್ರಶ್ನೆಯಾದ

'ಕಮಿಟ್‌ಮೆಂಟ್'ನ ಕಡೆಗೆ ಮಾತು ಹೊರಳಿತು. ಈ ದೃಷ್ಟಿಯಿಂದ ಪ್ರಸಿದ್ಧ ಎಡಪಂಥೀಯ ಕಾದಂಬರಿಕಾರ್ತಿ ವತ್ಸಲ ಹಾಗೂ ವೈಕ್ಕಂ ಮಹಮ್ಮದ್ ಬಷೀರರನ್ನು ಬಿಟ್ಟರೆ ನಾವು ಕಂಡುಉಳಿದ ಕೇರಳದ ಲೇಖಕರಿಗೆ ಖಚಿತ ನಿಲುವಿದ್ದಂತಿರಲಿಲ್ಲ. ನಮ್ಮ ಪಾಡಿಗೆ ನಾವಿದ್ದರಾಯಿತು, ವೆಚ್ಚಕ್ಕೆ ಹೊನ್ನಾಗಿ, ಬೆಚ್ಚಗಿನ ಮನೆಯಾಗಿ—ಒಳ್ಳೆಯ ಬರವಣಿಗೆಯನ್ನು ಕಾಯ್ದು ಕೊಂಡರಾಯಿತು ಎಂದೆನ್ನುವ, 'ಟಿಪಿಕಲ್' ಮಲೆಯಾಳಂ ಬರಹಗಾರನ ಧೋರಣೆಯಿದ್ದಂತಿತ್ತು. ಆದರೆ ವೈಕ್ಕಂ ಮಹಮ್ಮದ್ ಮಾತ್ರ, ಕನ್ನಡದ ಬಂಡಾಯ ಚಳುವಳಿಯ ಧೋರಣೆ, ಬರಹಗಾರನ ಸಾಮಾಜಿಕ ಜವಾಬ್ದಾರಿಯ ಬಗೆಗೆ ಕೊಡುತ್ತಿರುವ ಒತ್ತು,—ಇವೆಲ್ಲ ಕೇಳಿ ಪುಳಕಿತರಾಗಿ ಬಿಟ್ಟಿದ್ದರು. ಆದರೆ ಎಂ.ಟಿ.ಯು. ನಿಲವು ಒಂದಿಷ್ಟು ಬೇರೆಯಿತ್ತು:

"ನನ್ನ Committment ಮಾನವೀಯತೆಗೆ ಮಾತ್ರ. The Very movement decide to write you are Committed. ಆದರೆ ರಾಜಕೀಯವಾಗಿ 'ಕಮಿಟ್' ಆದವನಿಗೆ ಕೆಲವು ಮಿತಿಗಳಿರುತ್ತವೆ...."

ಸರಿ. ಆದರೆ ಥಟ್ಟನೆ ಹೀಗೆ 'Committment to humanism ಎಂದು ಹೇಳುವುದು ತುಂಬ ರೊಮ್ಯಾಂಟಿಕ್ ಆಗಿ ಕಾಣುವಂಥದ್ದು. ಆದರೆ ಲೇಖಕನ ಈ 'ಮಾನವೀಯತೆಗೆ ಬದ್ಧತೆ'ಯ ನಿಲುವನ್ನು ಒರೆಗಲ್ಲಿಗೆ ಹಚ್ಚುವ ಸಂದರ್ಭ ಬರುವುದು ತಾನಿರುವ ನೆಲದ ಸಂಸ್ಕೃತಿಯ ಅಮಾನವೀಯ ಆಚರಣೆಗಳ, ಧರ್ಮಗಳ ವಿರುದ್ಧ ದನಿ ಎತ್ತಬೇಕಾದ, ಸಮಯ ಬಂದರೆ ಬೀದಿಗಿಳಿಯಬೇಕಾದ ಸಂದರ್ಭ ಬಂದಾಗ ಮಾತ್ರ....ಈ ಪ್ರಶ್ನೆಗಳನ್ನು ನಾವು ಹಾಕಿದಾಗ ಎಂ.ಟಿ.ಯ ಬಳಿ ಖಚಿತ ಉತ್ತರವಿರಲಿಲ್ಲ.

"ಬರಹಗಾರನ ಕೆಲಸ ಬರೆಯುವುದು" ಎಂಬ ಒಂದು ಬಗೆಯ Safer ನಿಲವು ಅವರದಾಗಿತ್ತು. ಇಂಥ ನಿಲುವುಗಳ ಲೇಖಕನ ಮಾನವೀಯತೆಗೆ 'ಬದ್ಧತೆ' ಇಂಡಿಯಾದಂಥ ದೇಶದಲ್ಲಿ ಕೆಲ ಸಂದರ್ಭಗಳಲ್ಲಿ ಎಷ್ಟು 'ಪೊಟ್ಟ' ಅನಿಸಿಬಿಡುತ್ತದೆ ಎಂಬುದಕ್ಕೆ ಮತ್ತೆ ಒತ್ತು ಕೊಡುತ್ತಾ ಅವರನ್ನು ಇನ್ನಷ್ಟು ಕೆದಕುತ್ತಾ ಹೋದೆವು. ಅಸ್ಪೃಶ್ಯತೆಯಂಥ, ಜಾತೀಯತೆಯಂಥ ಕ್ರೂರ ನಡವಳಿಕೆಗಳ ವಿರುದ್ಧವಾದರೂ ಲೇಖಕ ಬೀದಿಗಿಳಿಯಬೇಕಾದಾಗ ನಿಮ್ಮ ನಿಲುವು, ಎಂದು ಕೇಳಿದಾಗ, ಒಂದು ಬಗೆಯ ತಾಳ್ಮೆಯಲ್ಲಿ,

"ಅಂಥ ಸಂದರ್ಭದಲ್ಲಿ ಅದು ಲೇಖಕನ ಕರ್ತವ್ಯ" ಅನ್ನುದವನ್ನು ಒಪ್ಪಿಕೊಂಡ ಎಂ. ಟಿ. ಕುತೂಹಲಕಾರಿ, ಆಶಾದಾಯಕ ಅಂಶವೊಂದನ್ನು ಹೊರಗೆಡಹಿದರು.

"ಕೇರಳದಲ್ಲಿ ಅಸ್ಪೃಶ್ಯತೆಯ ಸಮಸ್ಯೆ ಇಲ್ಲ. ಆದ್ದರಿಂದ ಅಸ್ಪೃಶ್ಯತೆಯ ವಿರುದ್ಧ ಹೋರಾಡಬೇಕಾದ ಅಗತ್ಯವೇ ಇಲ್ಲ"

ಆದರೆ ನಾವು ಅದನ್ನು ನಂಬುವ ಸ್ಥಿತಿಯಲ್ಲಿರಲಿಲ್ಲ. ಇತರೆಡೆಗಳಿಗೆ ಹೋಲಿಸಿದಾಗ 'ಅಸ್ಪೃಶ್ಯತೆ' ಕಡಿಮೆ ಇದ್ದಿರಬಹುದಾದರೂ ಪೂರ್ತಿ ಹೋಗಿದೆ ಎನ್ನುವುದನ್ನು ನಾವು ಒಪ್ಪಲಿಲ್ಲ. ವೈಕ್ಕಂ ಮುಹಮ್ಮದ್ ಕೂಡ ಕೇರಳದಲ್ಲೂ ಅಸ್ಪೃಶ್ಯತೆ ಇದೆ ಅನ್ನುವುದನ್ನು ಒಪ್ಪಿಕೊಂಡರು.

ಕೇರಳದ ಸಾಮಾಜಿಕ—ಆರ್ಥಿಕ ಸ್ಥಿತಿಗತಿಯ ಪ್ರಶ್ನೆ ಬಂದಾಗ ನಾವಾಗಲೀ ಎಂ.ಟಿ. ಯಾಗಲೀ ಖುಷಿಪಡುವ ಕಾರಣವಿತ್ತು: ಅಂದೆಂದರೆ; "ಇಲ್ಲಿ ಕಡು ಬಡತನವಿಲ್ಲ. ಒಬ್ಬ ಕೂಲಿ ಕೂಡ ದಿನಕ್ಕೆ ಇಪ್ಪತ್ತೈದು ಮುವತ್ತು ರೂಪಾಯಿ ಸಂಪಾದಿಸುತ್ತಾನೆ."

ನಿಜಕ್ಕೂ ನಮ್ಮನ್ನು ರೋಮಾಂಚನಗೊಳಿಸಿದ ಸತ್ಯ ಅದು. ಕೂಲಿ ಮಾಡುವ ಮನುಷ್ಯನೊಬ್ಬ ಅಷ್ಟು ಗಳಿಸಬಲ್ಲ ಎಂದರೆ ಕೇರಳದಲ್ಲಿ ಬಡತನ ದೊಡ್ಡ ಸಮಸ್ಯೆ ಆಗಿರಲಿಕ್ಕಿಲ್ಲ. ಆಂದರೆ ಎಂ. ಟಿ. ಟಿಪಿಕಲ್ ಮಧ್ಯಮವರ್ಗದ ಗೃಹಸ್ಥನ ಹಾಗೆ ಇಲ್ಲಿ ಕೆಲಸ ಮಾಡಲು ಕೂಡ ಆಳು ಸಿಕ್ಕುವುದಿಲ್ಲ....ತುಂಬ ದುಬಾರಿ" ಎಂದದ್ದು ಮಾತ್ರ ವಿಚಿತವಾಗಿತ್ತು. ಈ ಮಾತನ್ನು ಎಡಪಂಥೀಯ ಲೇಖಕಿ ವತ್ಸಲಾ ಕೂಡ ಹೇಳಿದಾಗ ಇನ್ನಷ್ಟು ಆಶ್ಚರ್ಯವಾಯಿತು.

"ಹಾಗಿದ್ದರೆ ಈಚೆಗೆ ನಿಮ್ಮನ್ನು ತುಂಬ ಕಾಡುವ ಸಮಸ್ಯೆ ಯಾವುದು?" ಎಂಬ ಪ್ರಶ್ನೆಗೆ ಅವರನ್ನು ಈಚೆಗೆ ಕಾಡುವ ಮಧ್ಯಮವರ್ಗದ ಬಗೆಗೆ, ಕೆಳಮಧ್ಯಮವರ್ಗದ ಮೌಲ್ಯಗಳ ಸಮಸ್ಯೆಯ ಬಗೆಗೆ ...ಹೇಳುತ್ತಾ, "ನನ್ನ ಹಳ್ಳಿಯಲ್ಲಿನ ಬ್ರಾಹ್ಮಣ ಕುಟುಂಬದ ಹಸಿವು ಬಡತನ" ಅವರನ್ನು ತುಂಬ ಕಾಡುವ ಆ ಬಗೆಗೆ ತಾವು ಬರೆಯಲಿರುವ ಬರವಣಿಗೆ ಕುರಿತು ಹೇಳುತ್ತಾ ಹೋದರು. ಬ್ರಾಹ್ಮಣನ ಸಮಸ್ಯೆಗೆ ಶೂದ್ರ ಮಿಡಿಯುವ. ಶೂದ್ರನ ಸಮಸ್ಯೆ ಬ್ರಾಹ್ಮಣನನ್ನು ಕಲಕುವ ಈ ಬಗೆ—ತುಂಬ ಆರೋಗ್ಯಕರವಾದುದ್ದೇ.

ಈ ಬಗೆಗೆ ನಮಗೇನೂ ಪೂರ್ವಾಗ್ರಹಗಳಿರಲಿಲ್ಲ. ಆದರೂ ಇಂಡಿಯಾದ ಗ್ರಾಮೀಣ ಬದುಕಿನ ಸಂದರ್ಭದಲ್ಲಿ ಒಬ್ಬ ದಲಿತನ ಹಸಿವಿಗೂ—ಬ್ರಾಹ್ಮಣನ ಹಸಿವಿಗೂ ಇರುವ ಅಂತರದ ಬಗೆಗೆ, ಒಬ್ಬ ದಲಿತನ ಅಸ್ಪೃಶ್ಯತೆ ಮತ್ತು ಅದಕ್ಕಂಟಿದ ಹಸಿವಿಗೆ ಸಾಮಾಜಿಕ—ಆರ್ಥಿಕ ಕಾರಣಗಳೆರಡೂ ಇರುವುದರಿಂದ ಬ್ರಾಹ್ಮಣನೊಬ್ಬನ ಹಸಿವು ಆರ್ಥಿಕ ಸಮಸ್ಯೆಯ ಪರಿಹಾರದಿಂದಲೇ ಪರಿಹಾರವಾಗುವಂಥಾದ್ದರಿಂದ ಇಂಥ ಸಂದರ್ಭದಲ್ಲಿ ನಾನು ಒಬ್ಬ ದಲಿತನ ಪರ ನಿಲ್ಲಲೇಬೇಕಾದ ಅನಿವಾರ್ಯತೆ ಪ್ರಸ್ತಾಪಿಸಿದಾಗ

ನಾಯರ್‌ಗೆ "ಅದರಲ್ಲಿ ಯಾವುದು ಸರಿ ಯಾವುದು ಹೆಚ್ಚು?" ಎಂದು ತೂಗುವ ಅಗತ್ಯ ಕಂಡುಬರಲಿಲ್ಲ. ಆದರೆ, "ಕೇರಳದಲ್ಲಿ ಬಡತನವಿಲ್ಲ" ಎಂಬ ಇವರ ಹೇಳಿಕೆ ಎಂ.ಟಿಯನ್ನು ಅಲ್ಲಿ ವಿವಾದಾಸ್ಪದವಾಗಿಸಿದೆಯಲ್ಲದೆ, ಇ. ಎಂ. ಎಸ್ ಮತ್ತು ಎಂ.ಟಿ ನಡುವೆ ವಾದಪ್ರತಿವಾದಗಳ ಕದನ ನಡೆದೇ ಇದೆ.

ನಡು ನಡುವೆ ಎಂ.ಟಿ ಫೋನು ಕರೆಗಳಿಗೆ ಉತ್ತರಿಸುತ್ತಲೇ ಇರುವಾಗಲೇ ಈ political ideologyಯ ಪ್ರಸ್ತಾಪ ಬಂದದ್ದು. ತುಂಬ ಕುತೂಹಲಕಾರಿ ಸಂಗತಿಯೊಂದರ ಕೇರಳದ ಹಲವು ಮುಖ್ಯ ಲೇಖಕರ ತಟಸ್ಥ ಧೋರಣೆ. "ಕರ್ನಾಟಕ ದಲ್ಲಿ ಸಾಹಿತಿಯ ರಾಜಕೀಯ ನಿಲವು, ಎಡಪಂಥೀಯ ಧೋರಣೆ ಇತ್ಯಾದಿಗಳು ತುಂಬ ಚರ್ಚೆಯಲ್ಲಿರುವುದಕ್ಕೆ ಅಲ್ಲಿ ಪ್ರಾಯಶಃ ಎಂದೂ ಎಡಪಂಥೀಯ ಸರ್ಕಾರ ವೊಂದು ಬಂದಿಲ್ಲದಿರುವುದೇ ಕಾರಣವಾಗಿರಬಹುದೇ?" ಎಂದು ನಾಗವಾರ ಅಂದಾಗ ಎಂ.ಟಿ, "ಇಲ್ಲದ್ದರ ಬಗೆಗೆ ಈ ರೀತಿಯ ಹುಚ್ಚು ಇದ್ದೇ ಇರುತ್ತೆ!" ಎಂದು ನಕ್ಕರು.

ಕನ್ನಡದ ಬರಹಗಾರರ ರಾಜಕೀಯ ಪ್ರಜ್ಞೆ ಅಲ್ಲಿಗಿಂತ ಪ್ರಖರವಾದದ್ದೋ ಅಥವಾ ಅಲ್ಲಿ ಮಾರ್ಕ್ಸಿಸ್ಟ್ ಸರಕಾರ ತುಂಬ ವರುಷಗಳಿಂದ ಇದ್ದು ಎಡದೃಷ್ಟಿ ಕೋನಕ್ಕೆ ಈ ಬಗೆಯ ಮಂಕುಕವಿದಿದೆಯೋ ಎಂಬುದು ಚರ್ಚಾಸ್ಪದ. ಆದರೆ ಅಲ್ಲಿನ ಮುಖ್ಯ ಲೇಖಕರ್‍ಯಾರೂ ಪ್ರತಿಗಾಮಿಗಳಲ್ಲ. ಎಂ. ಟಿ.ಯ ಪ್ರಕಾರ ಕಮಿಟೆಡ್ ಬರಹಗಾರರಲ್ಲಿ ಮುಖ್ಯ ಅನ್ನಿಸುವ ಬರಹಗಾರರ್‍ಯಾರು ಇಲ್ಲ" ಆ ದೃಷ್ಟಿಯಿಂದ ಕನ್ನಡ ಸಾಹಿತ್ಯದ ಸ್ಥಿತಿ ತುಂಬ ಆಶಾದಾಯಕವಾಗಿದೆ ಅನ್ನಬೇಕು.

"ಇಲ್ಲಿ ಹಿಂದೆ ಇದ್ದ ಮಾರ್ಕ್ಸಿಸ್ಟ್ ಸರ್ಕಾರಕ್ಕೂ ಈಗಿನ ಕಾಂಗ್ರೆಸ್ ಸರ್ಕಾರಕ್ಕೂ ವ್ಯತ್ಯಾಸ ಇಲ್ಲವೆ? ಎರಡರಲ್ಲಿ ಯಾವುದನ್ನು ಆರಿಸಿಕೊಳ್ಳುತ್ತೀರ?"ಎಂಬ ನಮ್ಮ ಪ್ರಶ್ನೆಗೆ "ಎರಡರಲ್ಲೂ ನಮಗೆ ಗೆಳೆಯರುಂಟು" ಎಂಬ ಮೋಜಿನ ಉತ್ತರ ಬಂತು! ಎಂ.ಟಿ.ಗೆ ಮಾರ್ಕ್ಸ್‌ವಾದದ ಬಗೆಗಾಗಲೀ, ಪ್ರಜಾಪ್ರಭುತ್ವದ ಬಗೆಗಾಗಲೀ ಒಲವಿದ್ದಂತಿರಲಿಲ್ಲ. ಆದರೆ 'ಎಮರ್ಜೆನ್ಸಿ' ಯಂಥ ಸಂದರ್ಭಧಲ್ಲಿ ತಾವು ದೂರದರ್ಶನದ ಕರೆಯನ್ನು ತಿರಸ್ಕರಿಸಿದ್ದನ್ನು 'ರಾಜಕೀಯ ಪ್ರಜ್ಞೆ'ಯ ಹೊತ್ತಿನಲ್ಲಿ ಸೇರಿಸಲು ಮರೆಯಲಿಲ್ಲ. ಈಮಧ್ಯೆಯೇ ಲೋಹಿಯಾ ನುಸುಳಿದ್ದು.

ಎಂ.ಟಿ. ಯಂಥ, ಭಾರತೀಯ—ಪಾಶ್ಚಾತ್ಯ ಸಾಹಿತ್ಯ, ತತ್ವಜ್ಞಾನವನ್ನೆಲ್ಲ ಓದಿಕೊಂಡ ಲೇಖಕ, ಇಂಡಿಯಾವನ್ನು ಸಮಗ್ರವಾಗಿ ಅರ್ಥ ಮಾಡಿಕೊಂಡ ಲೋಹಿಯಾರನ್ನೂ ಓದಿಲ್ಲ ಎಂದಾಗ ನನಗಂತೂ ಕೊಂಚ ಅಚ್ಚರಿಯೇ ಅನಿಸಿತು.

ಆದರೆ "ಎಂ.ಟಿ. ಲೋಹಿಯಾ ಓದಿಲ್ಲ" ಎಂಬುದನ್ನು ಕೇಳಿ ನಮ್ಮ ಕಾಳೇಗೌಡ ಈ ಆಳದಲ್ಲಿ ಕೆರಳಿದಾತಿತ್ತು. ಅವರು "Make it a point to Read Lohia" ಅಂತ ಕೇರಳವುದ್ದಕ್ಕೂ ನಾವುಚರ್ಚಿಸಿದ ಎಲ್ಲ ಲೇಖಕರೊಡನೆ ಹೇಳುತ್ತಾ ಹೊರಟರು. ಅದರ ಆರಂಭ ಆದದ್ದು ಈ ಎಂ.ಟಿ.ಯ ಮೂಲಕವೇ.

ಈ ನಡುವೆ ನಾಯರ್‌ರ ಬೀಡಿ ಕಟ್ಟು ಪೂರ್ತಿಯಾಗಿತ್ತು. ನಾವು ಚಹ-ಗಿಹ ಎಳೆದಿದ್ದೆವು. ಈ ಮಧ್ಯೆ ಕಲ್ಲಿಕೋಟೆಯಲ್ಲಿ ಬರಹಗಾರರೇ ಕೂಡಿ ನಡೆಸುವ "classic publication" (ಕನ್ನಡ ಸಾಹಿತಿಗಳಿಗೊಂದು ರೋಮಾಂಚನದ ಸುದ್ದಿ ಕ್ಲಾಸಿಕ್ಕಿನಿಂದ ಕೇರಳದ ಒಳ್ಳೆಯ ಬರಹಗಳನ್ನು ಪ್ರಕಟಿಸುತ್ತಾರೆ. ಶೇಕಡಾ ಮೂವತ್ತು ರಾಯಲ್ಟಿ!) ಬಂದಾಗಲೂ ನಮ್ಮ 'ಬೌದ್ಧಿಕ' ಚರ್ಚೆ ಇನ್ನು ಮುಗಿದಿರಲಿಲ್ಲ. ಕೇರಳದಲ್ಲಿ ಮಳೆಯಾಳ ಲೇಖಕರಷ್ಟೇ ಹೆಸರಾದ ನಮ್ಮ ಅನಂತಮೂರ್ತಿಯವರ ಕಡೆಗೂ ಮಾತು ತಿರುಗಿತು ಎಂ.ಟಿ. ಹೇಳಿದರು:

"ನನ್ನ ಪ್ರಕಾರ ಸಂಸ್ಕಾರ ಅವರ ಅತ್ಯುತ್ತಮ Art piece" 'ಅವಸ್ಥೆ' 'ಭಾರತೀಪುರ'ಗಳ ಬಗೆಗೆ ಅವರಿಗೇನೂ ಉತ್ಸಾಹವಿದ್ದಂತಿರಲಿಲ್ಲ. 'ಅವಸ್ಥೆ' 'ಸಂಸ್ಕಾರ' ಕ್ಕಿಂತ ಉತ್ತಮ ಕೃತಿ ಎಂಬುದರ ಕಾರಣಗಳನ್ನು ನಾನು ಕೊರೆದಾಗ ಎಂ.ಟಿ. ಒಪ್ಪಲು ತಯಾರಿರಲಿಲ್ಲ ಅವರ ದೃಷ್ಟಿಯೆಲ್ಲ 'ಕಲಾತ್ಮಕ success' ಕಡೇಗೆ ಇತ್ತು. "ಹಾಗೆ ನೋಡಿದರೆ 'ಘಟಶ್ರಾದ್ಧ ಸಂಸ್ಕಾರಕ್ಕಿಂತ ಯಶಸ್ವಿಕಥೆ' ಎಂದರು. ಕನ್ನಡದ ಚಿತ್ತಾಲ, ಮಲಯಾಳಂಗೆ ಈಗಾಗಲೇ ಬಂದಿರುವ ಕಾರಂತರ ಕಾದಂಬರಿಗಳ ಬಗೆಗೆ ಕೂಡ ಎಂ.ಟಿ.ಗೆ ಸಾಕಷ್ಟು ವಿಶ್ವಾಸ ವಿದ್ದಂತಿತ್ತು. ಕನ್ನಡದ ಈಚಿನ ಮಹತ್ವದ ಕಾಂಬರಿಗಳ ಬಗ್ಗೆ ಕೇಳಿದಾಗ 'ಶಿಕಾರಿ' 'ವೈಶಾಖ' 'ಮುಸ್ಸಂಜೆ' ಇತ್ಯಾದಿ ಗಳನ್ನು ಹೆಸರಿಸಿದೆವು. ಕೆಲವನ್ನಾದರೂ ಮಲೆಯಾಳಂನಲ್ಲಿ ಪ್ರಕಟಿಸುವ ಉದ್ದೇಶ ಎಂ ಟಿ.ಗಿದ್ದಂತಿತ್ತು.

ಆದರೆ ನನಗೆ ತುಂಬ ಖುಷಿಯಾಗಿದ್ದೆಂದರೆ ಇಂಗ್ಲಿಷಿನಲ್ಲಿ ಬರೆಯುವ ಪ್ರಯತ್ನ ವೆಲ್ಲ Literature in Regional Language ಗಳಿಗೆ ಹೋಲಿಸಿದಾಗ ಬರೇ Failure ಎನ್ನುವುದನ್ನು ಎಂ. ಟಿ. ಹೇಳಿದ್ದು ನಮ್ಮ ಆರ್. ಕೆ. ನಾರಾಯಣ್ ರಾಜಾರಾವ್ ಕಮಲಾಮಾರ್ಕಂಡೇಯ ಆನಂದ್ ಮುಂತಾದವರನ್ನು ವಿಚಿತ್ರವಾಗಿ ಕುಣಿಸುವುದರ ಬಗೆಗೆ ಎಂ.ಟಿ. ನಕ್ಕರು.

"ಪರಭಾಷೆಯುಲ್ಲಿ ಬರೆಯುವ ಇಂಡಿಯಾದ ತನ್ನ ಮಾತೃಭಾಷೆಯ ಭಾವನೆ ಗಳನ್ನು ಸದಾ ಅನುವಾದಿಸುವ ತಾಪತ್ರಯದಲ್ಲಿರುತ್ತಾನೆ. ಬರೆ ಇಂಗ್ಲಿಷ್ ಬಲ್ಲ ಇಂಡಿಯಾದ ಬರಹಗಾರ ಇಂಗ್ಲಿಷ್ ಗೊತ್ತಿಲ್ಲದ ಬಹುಸಂಖ್ಯಾತ ಜಗತ್ತಿನ

ಸಂಪರ್ಕವಿಲ್ಲದ ತುಂಬ ಪುಟ್ಟ ಜಗತ್ತಿನ ಸೀಮಿತ ಅನುಭವದಿಂದಾಗಿ ಸೋಲುತ್ತಾನೆ. ಆದಕ್ಕೆ Indian writing in Englishನಲ್ಲಿ ಮಹತ್ವದ ಕೃತಿಗಳೆನಿಸುವಂಥವು ಯಾವುವೂ ಇಲ್ಲ ಅಲ್ಲವೆ! ಎಂಬ ನಮ್ಮ ವಾದಕ್ಕೆ ಎಂ.ಟಿ. ಯ ಒಪ್ಪಿಗೆ ಕೂಡ ಇತ್ತು. ಹೀಗಾಗಿ ಇಂಗ್ಲೀಷ್ (Indian English) ವಿಮರ್ಶಕ ಇಂಡಿಯಾ ಜನಭಾಷೆಗಳ ಸಾಹಿತ್ಯದೊಟ್ಟಿಗೆ ತುಲನೆ ಮಾಡುವುದನ್ನು ಇನ್ನಾದರೂ ಕಲಿಯದಿದ್ದರೆ ಬರೇ ಭ್ರಮಾಧೀನ ಸಾಹಿತ್ಯ ಇಂಡಿಯನ್ ಇಂಗ್ಲಿಷಿನಲ್ಲಿ ಸೃಷ್ಟಿಯಾಗುತ್ತಲೇ ಹೋಗುತ್ತದೆ.

ನನ್ನ ಭೇಟ್ಟಿಗಿನ್ನು ಗುಡ್‌ಬೈ ಹಾಡುವ ಹಂತವಾಗಿ ಕೇರಳದ ಇತರ ಬರಹಗಾರರ ಬಗೆಗೆ ಪ್ರಶ್ನೆ ಹತ್ತಿರ. ಎಂ.ಟಿ.ಯ ಹತ್ತಿರ ಇದ್ದ ಅಸ್ತ್ರಗಳು ಒಂದೆರಡು ಮಾತ್ರ! ಟಿಪಿಕಲ್ ಕೇರಳದ ಲೇಖಕನ ಹಾಗೆ 'ಪರವಾಗಿಲ್ಲ' 'ಒಳ್ಳೆಯ ಲೇಖಕ' ಹೀಗೆ ಹೇಳುತ್ತಾ ಬಂದರು. Critical ಆಗಿ ಏನಾದರೂ ಹೇಳಿದರೆ ಹೇಗೊ ಎನ್ನುವ ನಾಜೂಕಿನಲ್ಲೆ ಮಾತಾಡುತ್ತಿದ್ದರು. ಮಲೆಯಾಳಕ್ಕೆ ಅನುವಾದಗೊಂಡ ಕನ್ನಡ ಶ್ರೀಕೃಷ್ಣ ಆಲನ ಹಳ್ಳಿ (ಕೇರಳದಲ್ಲಿ ನಾವು ಭೇಟ್ಟಿಯಾದ ಕೆಲ ಲೇಖಕರು 'ಆಲನಹಳ್ಳಿ' ಅಂದಕೂಡಲೇ ಗೆಂಡದಿಮ್ಮನ್' ಅಂದರು!) ಕೃತಿಗಳ ಬಗೆಗೆ ಕೇಳಿದಾಗ,

"ಜನಪ್ರಿಯಲೇಖಕ" ಅಂದರು" More Popular Writer? ಅಂತ ನಾನು ಕೆಣಕಿದಾಗ Slightly above than that ಅಂತಜೋಡಿಸಿದರು.... ಹೀಗೆ ತುಂಬ ಓದಿಕೊಂಡ ಮನುಷ್ಯ.ಹಲವಾರು ವಿಷಯಗಳ ಬಗೆಗೆ ಅಧಿಕಾರಯುತವಾಗಿ ಮಾತಾಡಬಲ್ಲ ಧೀಮಂತ ಲೇಖಕ ಎಂ.ಟಿ. ಯಾಕೊ ಜಾರಿಕೊಳ್ಳಲೇ ಯತ್ನಿಸುತ್ತಿದ್ದರು.

ತೀರ ಬಡವರ್ಗದಿಂದಲೇ ಬಂದು ಹಣಕಾಸಿನಲ್ಲಿ ಕೂಡ ಈಗ comfortable ಆಗಿರುವಂತೆ ತೋರುವ ನಲವತ್ತೈದರ ಹರೆಯದ (ನೀವು ಹಾಗೆ-ನಲವತ್ತಾದವರಂತೆ ಕಾಣುವುದಿಲ್ಲ ಅಂತ ನಾನುರೈಲು ಬೇರೆ ಬಿಟ್ಟೆ.) ಮಹತ್ವದ ಬರಹಗಾರ, ನಿರ್ದೇಶಕ ಎಲ್ಲ ಆಗಿರುವ ಎಂ.ಟಿ.ಗೆ ಕೆಲವು ಸಾಮಾಜಿಕ ಧೋರಣೆಗಳ ಬಗೆಗೆ ನಿರ್ಧಿಷ್ಟ ನಿಲುವು ಗಳಿಲ್ಲದಿದ್ದುದರ ಬಗೆಗೇ ನಾವಿಬ್ಬರೂ ಚರ್ಚಿಸುತ್ತಿದ್ದೆವು....

ಆದರೂ ನಾಯರ್ ಕೈ ಕುಲುಕಿ ಹೊರಬಂದಾಗ ಇಂಡಿಯಾದ ಗಮನಾರ್ಹ ಲೇಖಕರಲ್ಲೊಬ್ಬರೊಟ್ಟಿಗೆ ನಾಲ್ಕು ಘಂಟೆ ಕಳೆದ ಖುಷಿ ಮಾತ್ರ ಇಬ್ಬರಿಗೂ ಇತ್ತು. ಗುಂಡುಪ್ರಿಯರಾಗಿದ್ದ ಎಂ.ಟಿ. ಈಚೆಗೆ ಗುಂಡು ಬಿಟ್ಟಿದ್ದರಿಂದ ನಮಗೆ ಸಂದ ನಷ್ಟದ ಬಗೆಗೆ ತೀವ್ರ ವಿಷಾದ ಹೊತ್ತು ಕೇರಳದ ಹಿತವಾದ ಚಳಿಯಲ್ಲಿ ಬೆಚ್ಚಗಿನ ತಾಣ ಹುಡುಕುತ್ತಾ ಹೊರಟಾಗ ಗಂಟೆ ರಾತ್ರಿ ಎಂಟು ಮುಟ್ಟುತ್ತಿತ್ತು. ●

# ತಿಂಗಳ ಕಾವ್ಯ

## ಐದು ವಚನಗಳು

ಬಾಯಿಲ್ಲದವ ಮಾತಾಡುವುದ ಕಂಡು
ಬೆರೆಗಾದೆನಯ್ಯ
ಕಿವಿಯಿಲ್ಲದವ ಆಲಿಸುವುದ ಕಂಡು
ಬೆರಗಾದನೆಯ್ಯ
ಹೃದಯವಿಲ್ಲದವ ಅದರ ಕುರಿತಾಡುವುದ
ಕಂಡು ವಿಸ್ಮಯ ಗೊಂಡೆನೆಯ್ಯ
ಇದೆಲ್ಲವೂ ಇದ್ದವರ ಬಗೆಗಾನು
ಮೂಕನಾದನಯ್ಯ ಪರಮೇಶ್ವರ.

2

ಕೋಲ ತುದಿಯ ಕೋಡಗ
ಆಡಿಸುವನ ಗೋಣಿ ಹಿಡಿದಿತ್ತಯ್ಯ
ಕತ್ತಿಯಲಿಗಿಗೆ ಸಿಕ್ಕಿ ನಾಯ ನಾಲಗೆ
ಕತ್ತರಿಸದೆ ಕತ್ತಿ ಮುರಿದಿತ್ತಯ್ಯ
ಬಿದ್ದವನ ಕಾಲು ಎದ್ದವನ ಎದೆಗೆ
ದೊಪ್ಪೆಂದು ಒದ್ದಿತ್ತಯ್ಯ
ಬುಡ ಮೇಲೆ ಕೃತ್ಯಗಳ ಪರಿಗಣಿಸದೆ
ನೀನೇಕೆ ಶಿಲೆಯಾದೆ ಪರಮೇಶ್ವರ

3

ಚೈತ್ರದಲ್ಲಿ ಮಾವು ಮಲ್ಲಿಗೆ ಬೇವು
ದುಂಬಿಗಳ ಕರಿದಿತ್ತಯ್ಯ

ಎರಗೆರಗಿ ಅಳಿಗಳು ಸೋತು ಮರಳಿದವು
ಕೊರಗಿನಲಿ ಅಯ್ಯ
ಕಾಗೆ ಕೋಗಿಲೆ ಕೂಡ ಕೂರಲಾರದೆ
ಬಾನಲ್ಲಿ ಹಾರಿತ್ತಯ್ಯ
ಹೇಳು ಎನ್ನ ಚೆನ್ನ ಪರಮೇಶ್ವರ
ಅವುಗಳನಾವ ಭಯ ಅಟ್ಟಿತ್ತಯ್ಯ.

4

ಲಿಂಗಕ್ಕೆ ಜಾತಿ ಉಂಟೇನಯ್ಯ
ಜನಿವಾರಕ್ಕೆ ಜಾತಿ ಎಲ್ಲಯ್ಯ
ಒಂದು ಕಲ್ಲು, ಇನ್ನೊಂದು ದಾರ
ಕಲ್ಲು ದಾರಗಳಿಗೆ ಹೀಗೆ ಜಾತಿ ಅಂಟಿತಯ್ಯ
ನಿನ್ನಾಲಯದಲ್ಲಿ ನಗೆ ಎದ್ದು
ನನ್ನ ಬಡಿದಾಗ ಬಯಲಲ್ಲಿ
ನಾ ಬೆಚ್ಚಿ ಬಿದ್ದೆ ಪರಮೇಶ್ವರ.

5

ಸತ್ತ ನರ ಜಾತ್ರೆಯಲ್ಲಿ
ನರಿಗಳಿಗೆ ಔತಣವಿತ್ತಯ್ಯ
ತೋಳಗಳು ಕುಶಲವ ಕೇಳಿತ್ತಯ್ಯ
ಕಾಗೆಗಳು ಕೊಕ್ಕಿಂದ ಬಡಿಸಿತ್ತಯ್ಯ
ನಾಯಿಗಳು ನೀರುಣಿಸಿತ್ತಯ್ಯ
ಎನ್ನ ಪರಮೇಶ್ವರ ಹೇಳು
ಅಲ್ಲಿ ಕೋತಿಗಳಿಗೇನು ಕೆಲಸ
ಲಾಗಕ್ಕೆ ಉಂಟೆ ಅರ್ಥ!

—ಎಂ. ಎನ್. ವ್ಯಾಸರಾವ್

## ಹೊರಗೆ

ಆಪರೇಷನ್ ಥೇಟರಿನ ಹೊರಗೆ ಕಾದವರ
ಕುರಿತು ಕವಿತೆ ಬರೆಯುವಾಗ ಥೇಟರಿನ ಬಾಗಿಲ
ಬಳಿ ಕಪ್ಪಗೆ ಪೇಳೆ ಬಂದು ಬಿಳಿ ಉಡುಪಿನಲ್ಲಿ
ನಿಂತಿರುತ್ತಗೆ. ನಕ್ಕಿಗೀ ಘಡ ಘಡಿಸಿದ ರೆಕ್ಕೆಸಪ್ಪಳ
ಕಿಟಕಿಯ ಆಕಾರದ ಚೌಕಕ್ಕೆ ಅಂಟಿರುತ್ತದೆ.
ಬಿಳಿಯ ಅಮೃತ ಶಿಲೆಯ ನೆಲದಡಿಗೆ
ಥಣ್ಣನೆಯ ರಕ್ತ ಹರಿದಂತೆ ಕಾಲಿನಗುಂಟ ನಾಡಿಯ
ಬಡಿತ ಎದ್ದು ಗುಂಡಿಗೆ ಸೇರುತ್ತದೆ.

ಎಷ್ಟು ಬಣ್ಣಗಳನ್ನು ಸೇರಿಸಿ ಬಿಳಿಯ ಬಣ್ಣ ತಯಾರಾಗಬೇಕು
ಎಷ್ಟೋ ಸ್ನಾಯುಗಳನ್ನು ವರ್ತಿಸಿ ಒಂದು ನಗು. ಸಾವಿರ
ಸುಳ್ಳು ಹೇಳಿ ಒಂದು ಮದುವೆ ಮತ್ತು ನಂತರ
ಎಲ್ಲ ಸುಳ್ಳುಗಳ ತಲೆಯ ಮೇಲೆ ಹೊಡೆದಂತೆ ಒಂದು
ಮಗು.

—ಜಯಂತ ಕಾಯ್ಕಿಣಿ

## ನೀನಿಲ್ಲದೆ

ಬಿದ್ದುಕೊಂಡಿರುವೆ ಅಂಗಾತ
ಮಾಡು ನೋಡುತ್ತಾ
ನೀನಿಲ್ಲದೆ
ಮಾಡಲೇನಿಲ್ಲದೆ.

ನೀನಿಲ್ಲದೆ
ಏನು ಬರೆದೇನು?
ಬರಿದೆ ಹರಿದೇನು ಹಾಳೆ
ವ್ಯರ್ಥಕಳೆದೇನು ವೇಳೆ.
ಬಾ ತುಂಬು ಎದೆಯು
ಅಕ್ಷಯ ಶಾಯಿಯಾಗಿ
ಶಾಯಿರಿಯ ಹೊಳೆ
ಹರಿಸೋಣ ಕಾವ್ಯಧಾರೆ.

ನೀನಿಲ್ಲದೆ
ಎಲ್ಲಿ ಹೋದೇನು?
ಇಲ್ಲೆ ಉಳಿದೇನು
ಕೊಳೆದೇನು ಇಲ್ಲೇ
ಬಾ ಬಿಚ್ಚಿ ನೀಲ್ಲು
ನನ್ನೆದುರು ಹಾಯಾಗಿ.
ದೋಣಿ ಸಾಗಲಿ ನುಗ್ಗಿ
ವಿಹರಿಸೋಣ ಹಾಯಾಗಿ.

ನೀನಿಲ್ಲದೆ
ಹೇಗೆ ಹೊಳೆದೇನು?
ಬೆಳಕು ತೂರುವ
ಖಾಲಿ ಗಾಜು ನಾನು
ಬಾ ಸವರು ನನ್ನ
ಬೆನ್ನ ನಯವಾಗಿ,
ಪಾದರಸವಾಗಿ. ಪ್ರತಿ
ಫಲಿಸೋಣ ಒಂದುಗೂಡಿ.

ಪದಕಟ್ಟಿ ಹಾಡಬಹುದು,
ದೋಣಿಯಾಟ ಆಡಬಹುದು.
ಪ್ರತಿಬಿಂಬ ಮೂಡಬಹುದು.
ನೀನಿದ್ದರೆ

ಏನೂ ಮಾಡಬಹುದು.
ಆದರೆ, ನೀ
ನಿಲ್ಲದಿದ್ದರೆ
ಮಾಡುವುದು ಹೇಗೆ?
ಅದಕ್ಕೆ ಹೀಗೆ
ಮಲಗಿರುವ ಲಿಂಗಾತ
ಮಾಡು ನೋಡುತ್ತ
ಮಾಡಲೇನಿಲ್ಲದೆ....

—ಎಚ್. ದುಂಡಿರಾಜ್

## ಅಳಲು

ನಾವು ಪ್ರೀತಿಯಿಂದ ಮಾತನಾಡಿದ್ದೇವೆ
ನಿಟ್ಟುಸಿರುಗಳ ಬಗ್ಗೆ, ನೋವುಗಳ ಬಗ್ಗೆ, ಕಾಡುವನೆನಪುಗಳ ಬಗೆ
ಹೌದು! ಖಂಡಿತಾ ಅರಿವಿದೆ
ನಾವು ಇನ್ನೂ ಮಾತಾಡಬೇಕಾಗಿದೆ.
ಖಂಡಿತಾ ಗೆಳೆಯಾ
ಇದು ಕವನವಲ್ಲ.
ಹೃದಯದ ಆಳದಲಿ ಅಡರುವ ನೋವುಗಳು.
ಕತ್ತಲಿನಲ್ಲಿ ಕೇಳಿದ ಧ್ವನಿಗಳು. ಭಾಷಣ ಕಟ್ಟುವ ಬಡೇಮಿಂಯಾ
ಸುಂದರ ಕನಸ ಕೊಡುತ್ತೇನೆ ಬಾ ಎಂದ ಗೆಳತಿ
ಮತ್ತೊಬ್ಬನ ಹಾಸಿಗೆಯಲ್ಲಿ ಅರೆರೆಪ್ಪೆ ಮುಚ್ಚಿ
ದಿಮುಗುಟ್ಟುವ ಕ್ಷಣಗಳ ಮಧ್ಯೆ ಮುಲುಕುತ್ತಿದ್ದುದರ ಬಗ್ಗೆ,
ಚಳಿರಾತ್ರಿಗಳ ಮಧ್ಯೆ ಸಿಡಿಯುವ ಆತ್ಮಗಳನ್ನು ಹೊತ್ತು
ಗೋರಿಗಳ ಮಧ್ಯೆ ಎಲ್ಲರ ಜೀವಿಗಳಿಗೆ ಮುದ್ದಿಡುತ್ತಾ
ಮಾತನಾಡಬೇಕು : ಏಕೆ ಹೀಗೆ?
ಆದರೆ ಗೆಳೆಯಾ—

ನನ್ನ ಎದೆಯಲ್ಲಿ ಮತ್ತೂ ಮಾತುಗಳಿವೆ.
ತುಡಿವ ದನಿಗಳಿವೆ, ಕಂಪಿಸುವ ಕಂಠಗಳ ಮಧ್ಯೆ,
ಸಿಕ್ಕಿಹೋದ ಮಾತುಗಳು ಎದೆಯೊಳಕ್ಕಿಳಿದು
ಗೋರಿಗಳ ಮಧ್ಯದಲ್ಲಿ ಕಿರುಗುಡುವ ಮುಂಚೆ,
ಹುಟ್ಟುವ ಮಾತುಗಳಿಗೆ ಪುಟವಿಡಬೇಕು.
ಒಡಲಾಳ ಮಧ್ಯದಲಿ ಕಿರುಸುಳಿದ ಕಂಠಗಳ
ಪಳೆಯುಳಿಕೆಯಾಗಿ ಮರೆಯಾಗುವುದಕ್ಕೆ ಮುಂಚೆ,
ಕೇಳುತ್ತಿದ್ದೆಯು ಗೆಳೆಯಾ
ನಿನ್ನ ಸುತ್ತ ಬಾವಲಿಗಳ ರೆಕ್ಕೆಸಪ್ಪಳ
ಕಂಠಗಳ ಹಿಡಿದೊತ್ತಿ, ಶಬ್ದಗಳ ಹಿಸುಕುತ್ತ
ಹಾರುತ್ತಲಿದೆ ಬಾವಲಿ ಗಿಡುಗ
ದನಿಗಳಿಗೆ ಓಟುಗೋಲ ಓಟಲೇಬೇಕಾಗಿದೆ
ಸ್ವಚ್ಚಂದ ಹಾರುವ ರೆಕ್ಕೆಗಳಿಗೆ, ಬೀಸು ಶಬ್ದಗಳಿಗೆ
ಮಾತುಗಳ ಕ್ಷಣಕ್ಷಣಕೆ
ಎದೆಯಲ್ಲಿ ಪಾಷಾಣ, ಎಲ್ಲಿಯದೋ ವಿಷಮದ್ದು.

—ಮೋಹನ್ ಜಿ. ಎಸ್.

## ನಿರಂತರ

ನಿದ್ದೆ ಬಾರದ ದೀರ್ಘ ರಾತ್ರಿಗಳು,
ಹಾಸಿಗೆ ಕಚ್ಚಿದ ಹತಾಶ ದೇಹ
ಗುಯ್ ಗುಟ್ಟುತ್ತಾ ಕಚ್ಚಿ, ಕಚ್ಚಿ
ರಕ್ತ ಹೀರುವ ಸೊಳ್ಳೆಗಳು
ಎದ್ದದ್ದು, ಒದ್ದೊದ್ದು ಕಾಡುವ ಭೂತಗಳು.

ಗೆರೆಯಿಲ್ಲದ ಗೆರೆಗಳು,
ಅಪ್ಪಿಕೊಂಡ ಬೇಡಗಳು,
ಹಿಂಬಾಲಿಸುವ ಹೆಜ್ಜೆ ಸಪ್ಪಳಗಳು,
ಅವಕಾಶದಲ್ಲಿ ವ್ಯರ್ಥ ಹುಡುಕಾಟ.

ಸೊನ್ನೆಗಳ ಸುತ್ತ ಏನೆಲ್ಲಾ ಹುಡುಕಿ ಹೊಡೆಯುವ ಗಿರಿಕಿ
ವರ್ತಮಾನದಲ್ಲಿ ಎಲ್ಲವನ್ನೂ ಕಳಕೊಂಡ ಹಾಗೆ.

ತಣ್ಣಗಾಗುತ್ತವೆ ಹಾಸಿಗೆ, ದಿಂಬು, ಕನಸುಗಳು,
ಶೆಂಕ್ಕು ಹಿಡಿದ ಕ್ರಿಯೆಗಳು
ಕನವರಿಸುತ್ತಾವೆ ನಿದ್ದೆಯಲ್ಲಿ
ಕಳಗೊಂಡ ಮೌಲ್ಯಗಳಿಗಾಗಿ.
ಅಸಹಾಯಕ ಚಡಪಡಿಕೆ ಅಮೂರ್ತತೆಗಾಗಿ.

—ಕನಕ. ಹಾ.ಮ.

## ಕೋಟೆ

ಕೋಟೆಯೊಳಗಿನ
ಕಲ್ಲುಗಳ ಕತ್ತಲಡಿ
ಮೂಳೆ-ಮಾಂಸಗಳ
ಉಜ್ಜುವಿಕೆಯ
ಬದುಕು

ಸತ್ತ ಬದುಕಿಗೆ
ಮುತ್ತು ರತ್ನಗಳ
ಹೊಳಪು;
ಶ್ರುತಿಯಿಲ್ಲದ ರಾಗಕ್ಕೆ,
ಬಳೆಗಳ 'ಗಲಗಲ'
ಗಾಜಿನ ದನಿ

ಸೂರ್ಯಕಿರಣವ
ಸೋಕಿಲ್ಲದ
ನಗು
ಕತ್ತಲ ತೇವದಲ್ಲಿ
ಅರಳಲಾರದ
ಕೊಳೆತ ಪಾಚಿ

ಕಟ್ಟಿದ ಕನಸುಗಳು
ಸೋಪಿನ ನೊರೆಯಾಗಿ
ಪಾತ್ರೆಗಳ ಶಬ್ದದಲಿ
ಮಗುವಿನ ಚೀರಾಟದಲಿ
ಪರ ಅಧಿಕಾರದ ಕಾಲಗಡಿ
ಅಪ್ಪಚ್ಚಿಯಾಗಿ

ದನಿ ಕೊಡಲಾರದ
ಖಾಲಿ ಗೋಡೆ ಕಿಟಕಿ
ಬಾಗಿಲುಗಳು
ಪರದೆಯ ಹಿಂದಿನ ಭಾವಗಳು
ರೂಪ ಪಡೆಯದೆ
ಸತ್ತು ಕರಕಲಾಗತ್ತವೆ.

—ಸಿ. ಜಿ. ಮಂಜುಳ

" Yes, I would put music slightly ahead of literature. I think a world without music would be worne than a world without books. I dont whether a world without literature, exactly. But I've always responded to it in an uneducated sort of way–I've done some half-hearted attempts at semi-self education. And I find it a necessity.

by KINGSLEY AMIS

# ಶ್ರೀಲಂಕಾ – ಪ್ರಜಾಪ್ರಭುತ್ವದ ಅವನತಿ:

—ಮುರಳೀಧರ

ಪಂಜಾಬ್, ಅಸ್ಸಾಂ, ಖಲಿಸ್ತಾನ್, ಮಿಜೋರಾಮ್, ನಾಗಾಲ್ಯಾಂಡ್ ಇತ್ಯಾದಿ ಸಮಸ್ಯೆಗಳು ಭಾರತದ ರಾಷ್ಟ್ರೀಯ ಪ್ರಶ್ನೆಗಳಿಗಾಗಿ (National Questions) ಬೆಳೆದು ಬೆಂದುಹೋಗುತ್ತಿರುವ ಸಮಯದಲ್ಲೆ ನಮ್ಮ ನೆರೆಯ ರಾಷ್ಟ್ರ ಶ್ರೀಲಂಕಾದಲ್ಲಿ ತಮಿಳರ ಮೇಲಿನ ದೌರ್ಜನ್ಯ ಅತ್ಯಂತ ಅಮಾನುಷ ಹಾಗೂ ಭೀಕರವಾದದ್ದು. ಶ್ರೀಲಂಕ ತಮಿಳರ ಸಮಸ್ಯೆಯ ತಾಪ ಭಾರತದಲ್ಲಿ, ಅದರಲ್ಲು ಹೆಚ್ಚಾಗಿ ತಮಿಳುನಾಡಿನಲ್ಲಿ ಸಾಕಷ್ಟು ತಳಮಳವುಂಟುಮಾಡಿದೆ. ಡಿ.ಎಂ.ಕೆ. ಮತ್ತು ಎ.ಐ.ಡಿ.ಎಂ.ಕೆ. ಪರಸ್ಪರ ಪೈಪೋಟಿಯಿಂದ ಹೇಸಿಗೆ ತರುವಷ್ಟು ರೀತಿಯಲ್ಲಿ ತಮ್ಮ ಕಾಳಜಿಯನ್ನು ವ್ಯಕ್ತಪಡಿಸಿವೆ; ಕಾಮರಾಜ್ ಕಾಂಗ್ರೆಸ್ ಪಕ್ಷದ ಒಬ್ಬ ನಾಯಕರಂತೂ ಭಾರತ ಮತ್ತು ಶ್ರೀಲಂಕದ ಮಧ್ಯೆ ಸಮುದ್ರವಿದೆಯೆಂಬುದನ್ನು ಮರೆತು ಕಾಲ್ನಡಿಗೆಯಲ್ಲೇ ಶ್ರೀಲಂಕ ಸೇರಿ ಮುತ್ತಿಗೆ ಹಾಕುವುದಾಗಿ ಗುಡುಗಿದರು.

ಬಂಡವಾಳಶಾಹಿ ಜಗತ್ತಿನಲ್ಲಿ ತೀವ್ರವಾಗಿ ಕಾಡುತ್ತಿರುವ ರಾಷ್ಟ್ರೀಯ ಪ್ರಶ್ನೆಗಳನ್ನು ಭಾವಾವೇಶದಿಂದ ನೋಡಿದಲ್ಲಿ ಇವು ಹೆಚ್ಚು ಜಟಿಲವಾಗುವ ಪರಿಸ್ಥಿತಿಯನ್ನು ಇತಿಹಾಸದಿಂದ ಕಾಣಬಹುದು. ಕಠೋರವಾದ ಶಾಸನಗಳಿಂದ, ಮಿಲಿಟರಿ ಸಹಾಯದಿಂದ ಜನತೆಯ ಆಶೋತ್ತರಗಳನ್ನು ಸದೆಬಡಿಯಲು ಸಾಧ್ಯವಿಲ್ಲ ಎಂಬುದನ್ನು ಇತಿಹಾಸ ಸಾಕ್ಷಿಗಳು ಸಾಬಿತುಗೊಳಿಸಿವೆ. ಶ್ರೀಲಂಕಾದ ತಮಿಳರ ಸಮಸ್ಯೆಗೆ ತಮಿಳುನಾಡಿನಲ್ಲಿ ತೋರಿದ ಪ್ರತಿಕ್ರಿಯೆ ಕೇವಲ ಅಂಧಾಭಿಮಾನದಿಂದ ಬಂದದ್ದೆಂದು ವಿಚಾರವಂತರಿಗೆ ಹೊಳೆಯದೆ ಇರುವುದಿಲ್ಲ. ಇಂತಹ ಪ್ರತಿಕ್ರಿಯೆಗಳನ್ನು ಸಂಶಯದಿಂದ ನೋಡಬೇಕಾಗುತ್ತದೆ.

ಭಾರತಕ್ಕೆ ಶ್ರೀಲಂಕ ಸಮೀಪವಾಗಿರುವಷ್ಟೆ ಅದರ ಸಮಸ್ಯೆಗಳು ಕೂಡ ಸಮೀಪವಾಗಿವೆ. ಆದ್ದರಿಂದ ಶ್ರೀಲಂಕದ ರಾಷ್ಟ್ರೀಯ ಸಮಸ್ಯೆಯನ್ನು ಅತ್ಯಂತ ತೀವ್ರವಾಗಿ ಹಾಗೂ ಭಾವರಹಿತವಾಗಿ ಅರ್ಥಮಾಡಿಕೊಳ್ಳಬೇಕಾದ ಅಗತ್ಯವಿದೆ. ಮೂರನೆ ಜಗತ್ತಿನ ರಾಷ್ಟ್ರಗಳಲ್ಲಿ ಬಂಡವಾಳಶಾಹಿವರ್ಗ ಪ್ರಜಾಪ್ರಭುತ್ವದ ಮೌಲ್ಯಗಳನ್ನು ಬೆಳೆಸುವಲ್ಲಿ ವಿಫಲಗೊಂಡಿದೆ. ಬಂಡವಾಳಶಾಹಿ ಯೂರೋಪಿನಲ್ಲೂ ಕೂಡ ಈ ಸಮಸ್ಯೆಗಳು ಬೆಳೆಯುತ್ತಿವೆ. ವಿಶ್ವದಾದ್ಯಂತ

ಬಂಡವಾಳಶಾಹಿ ಅತ್ಯಂತ ಕಠಿಣ ಪರಿಸ್ಥಿತಿಯನ್ನು ಎದುರಿಸುತ್ತಿರುವಾಗ ಶ್ರೀಲಂಕಾದ ಬಂಡವಾಳಶಾಹಿ ವರ್ಗ ತಮಿಳರ ಸಮಸ್ಯೆಗೆ ಉತ್ತರ ಹುಡುಕಬಲ್ಲದು ಎಂಬುದು ನಂಬಲಸಾಧ್ಯ.

ತಮಿಳರ ಸಮಸ್ಯೆ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಶ್ರೀಲಂಕಕ್ಕೆ ಸ್ವಾತಂತ್ರ್ಯ ಸಂದರ್ಭದಲ್ಲಿ ಕೊಟ್ಟ ಉಡುಗೊರೆ. ಸಿಂಹಳ ರಾಷ್ಟ್ರೀಯತೆಯ ಅಂಧಾಭಿಮಾನ ಹೆಚ್ಚಿದಂತೆಲ್ಲ ತಮಿಳು ಜನಾಂಗದ ಮೇಲೆ ಹಲ್ಲೆ ಹೆಚ್ಚುತ್ತಿದೆ. ಶ್ರೀಲಂಕದಲ್ಲಿ ಪೌರತ್ವವನ್ನು ಕಳೆದುಕೊಂಡ ಮತ್ತು ದ್ವಿತೀಯ ದರ್ಜೆ ಪ್ರಜೆಯಾಗಿರುವ ತಮಿಳರು ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸುತ್ತಿದ್ದಾರೆ. ಶಾಂತಿಯುತ ಹೋರಾಟಗಳು ಪರಿಹಾರ ತರದಿದ್ದುದರಿಂದ ಬೇಸತ್ತ ತಮಿಳು ಯುವಕರು ಹತಾಶೆಯ ಹಂತ ತಲುಪಿ ಭಯೋತ್ಪಾದಕ ಚಟುವಟಿಕೆಗೆ ತೊಡಗಿದ್ದಾರೆ. ಜಯವರ್ಧನೆ ಸರ್ಕಾರ ಕ್ರೂರ ಶಾಸನಗಳಿಂದ ತಮಿಳು ಯುವಕರನ್ನು ಬಂಧಿಸಿ, ಯಾವುದೇ ವಿಚಾರಣೆಗೊಳಪಡಿಸದೆ ಜೈಲುಗಳಲ್ಲಿ ಕೊಳೆಯುವಂತೆ ಮಾಡಿದೆ. ಶ್ರೀಲಂಕ ಸೈನ್ಯ ಶಾಂತಿಪಾಲನೆಯ ಹೆಸರಿನಲ್ಲಿ ಈ ಯುವಕರುಗಳನ್ನು ಗುಂಡಿಟ್ಟು ಕೊಂದಿದೆ. ಸೈನಿಕರು ಮೂವರು ತಮಿಳು ಹುಡುಗಿಯರ ಮೇಲೆ ನಡೆಸಿದ ಅತ್ಯಾಚಾರ ಬೆಂಕಿಗೆ ತುಪ್ಪ ಹಾಕಿದಂತಾಯಿತು.

ಕಳೆದ ವರ್ಷ ಜುಲೈ 23ರಂದು ಜಾಫ್ನದಲ್ಲಿ ತಳವೂರಿದ್ದ ಶ್ರೀಲಂಕ ಸೈನಿಕ ತುಕಡಿಯ ಒಂದು ಟ್ರಕ್‌ಮೇಲೆ ಎಸೆದ ಬಾಂಬ್‌ನ ಪರಿಣಾಮವಾಗಿ ಹದಿಮೂರು ಸೈನಿಕರ ಸಾವು ನಂತರ ನಡೆದ ಘಟನೆಗಳಿಗೆ ಕಾರಣವೆಂದು ಪತ್ರಿಕೆಗಳಲ್ಲಿ ಪ್ರಚಾರ. ಈ ಕೋಮು ಗಲಭೆಗಳಲ್ಲಿ ಭಾರತದ ಕೈವಾಡ, ರಷ್ಯಾದ ಕೈವಾಡವಿದೆಯೆಂದು ಸರ್ಕಾರದ ಆರೋಪ. ಅಲ್ಲಿಯ ಎಡಪಕ್ಷಗಳಾದ ನವಸಮ ಸಮಾಜಪಕ್ಷ, ಕಮ್ಯೂನಿಸ್ಟ್ ಪಕ್ಷ, ಮತ್ತು ಜನತ ವಿಮುಕ್ತಿ ಪೆರಮೂನ ಪಕ್ಷಗಳು ಈ ಗಲಭೆಗಳಿಗೆ ಕಾರಣವೆಂದು ದೋಷಾರೋಪಣೆ ಮಾಡಿ ಜಯವರ್ಧನೆಯ ಪಕ್ಷ ಮತ್ತು ಸರ್ಕಾರ ಈ ಪಕ್ಷಗಳಿಗೆ ತಮ್ಮನ್ನು ಸಮರ್ಥಿಸಿಕೊಳ್ಳಲು ಯಾವ ಅವಕಾಶವನ್ನು ಕೊಡದೆ ಕಾನೂನು ಬಾಹಿರಗೊಳಿಸಿತು. ಹಾಗೂ ಈ ಪಕ್ಷಗಳ ನಾಯಕರುಗಳನ್ನು ಬಂಧಿಸಲು ಆದೇಶ ನೀಡಲಾಯಿತು. ಕಮ್ಯುನಿಸ್ಟ್ ಪಕ್ಷದ ನಾಯಕರು ತಾವೇ ಪೋಲೀಸ್ ಠಾಣೆಗಳಿಗೆ ಹೋಗಿ ಬಂಧನಕ್ಕೊಳಗಾದರೆ ನವಸಮ ಸಮಾಜ ಪಕ್ಷ ಮತ್ತು ಜನತ ವಿಮುಕ್ತಿ ಪೆರಮೂನ ಪಕ್ಷಗಳ ನಾಯಕರುಗಳು ಇಂದಿಗೂ ಭೂಗತರಾಗಿದ್ದಾರೆ.

ಜಯವರ್ಧನೆಯ ಪಕ್ಷ ಮತ್ತು ಸರ್ಕಾರ ಕಳೆದವರ್ಷ ತಮಿಳರ ಮೇಲೆ ನಡೆದ ದೌರ್ಜನ್ಯಕ್ಕೆ ಸಂಪೂರ್ಣ ಜವಾಬ್ದಾರಿಯೆಂದು ಹೇಳಲು ಸಾಕಷ್ಟು ಪುರಾವೆಗಳಿವೆ ಬಾಂಬ್ ಆಸ್ಫೋಟಗೊಂಡ ಮರುಕ್ಷಣವಲ್ಲೆ ಜಾಫ್ನ ಹಾಗು ಇತರೆ ತಮಿಳು ಪ್ರದೇಶಗಳಲ್ಲಿ ನೆಲಸಿದ್ದ ಸಿಂಹಳೀಯರನ್ನು ಆ ಪ್ರದೇಶಗಳಿಂದ ಹೊರಬರಲು ಆದೇಶ ನೀಡ

ಲಾಯಿತು. ಇದು ಸಿಂಹಳ ಸೈನಿಕರಿಗೆ ತಮ್ಮ ಪ್ರತೀಕಾರ ತೆಗೆದುಕೊಳ್ಳಲು ದಾರಿ ಸುಗಮಮಾಡಿಕೊಟ್ಟಂತಾಯಿತು. ನಂತರ ತಮಿಳರ ಮೇಲಿನ ವ್ಯವಸ್ಥಿತ ಹಲ್ಲೆ, ಅವರ ಆಸ್ತಿಪಾಸ್ತಿಗಳ ಲೂಟಿ ಮತ್ತು ನಾಶ ಈ ಗಲಭೆ ಪೂರ್ವಯೋಜಿತವೆಂಬು ದಕ್ಕೆ ಸಾಕ್ಷಿ. ಶ್ರೀಲಂಕ ಸರ್ಕಾರದ ಇಬ್ಬರು ಸಚಿವರು—ಸಿರಿಲ್ ಮ್ಯಾಥ್ಯೂ ಮತ್ತು ಗಾಮಿನಿ ಜಯಸೂರ್ಯ—ಈ ದೌರ್ಜನ್ಯದ ನಾಯಕತ್ವ ವಹಿಸಿದ್ದರು. ರಾಷ್ಟ್ರೀಕೃತ ಶ್ರೀಲಂಕ ಪೆಟ್ರೋಲಿಯಂ ಕಾರ್ಪೋರೇಷನ್ ಗಲಭೆಕೋರರಿಗೆ ಪೆಟ್ರೋಲ್ ಸರಬರಾಜು ಮಾಡಿದ್ದು ನಂತರ ವರದಿಯಾಗಿದೆ. ಈ ಗಲಭೆಯ ಹಿಂದೆಯೇ ಭೆಟ್ಟಿಕೋವ ಜೈಲಿ ನಲ್ಲಿಡಲಾಗಿದ್ದ ತಮಿಳು ರಾಜಕೀಯ ಕೈದಿಗಳ ಪೈಕಿ 53 ಜನರನ್ನು ಸೈನಿಕರು "ಜೈಲು ದಂಗೆ" ಎಂದು ಹೇಳಿ ಹಾಡುಹಗಲೆ ಗುಂಡಿಟ್ಟು ಸುಟ್ಟರು. ಸಿಂಹಳೀಯರ ಜೊತೆ ಸರಿಸಮಾನ ಹಕ್ಕುಗಳನ್ನು ಕೇಳಿದ ತಮಿಳರ ಉದ್ಧಟತನಕ್ಕೆ ಸರಿಯಾದ ಉತ್ತರ ಸಿಕ್ಕಿತೆಂದು ಅನೇಕರಿಗೆ ಖುಷಿ. ಅಧ್ಯಕ್ಷ ಜಯವರ್ಧನೆ ಈ ಘಟನೆಗಳ ಬಗ್ಗೆ ಯಾವುದೇ ಸಂತಾಪ ವ್ಯಕ್ತಪಡಿಸದಿದ್ದದು ಜನಾಂಗ ದ್ವೇಷ ಹೇಗೆ ಸಂವೇದನೆಗಳನ್ನು ಹಿಸುಕಿಹಾಕಬಲ್ಲದು ಎಂಬುದಕ್ಕೆ ನಿದರ್ಶನ.

ಶ್ರೀಲಂಕದ ತಮಿಳರ ಸಮಸ್ಯೆಯನ್ನು ಅಲ್ಲಿಯ ಸಾಮಾಜಿಕ ಹಾಗೂ ಆರ್ಥಿಕ ನೆಲೆಗಟ್ಟಿನಲ್ಲಿ ಅರ್ಥಮಾಡಿಕೊಳ್ಳಬೇಕಾದುದು ಅವಶ್ಯಕ. ಹತ್ತೊಂಬತ್ತನೆ ಶತಮಾನದ ಕೊನೆಯ ಭಾಗದಿಂದಾಚೆಗೆ ವಿದೇಶಿ ವ್ಯಾಪಾರಿಗಳನ್ನು, ನಂತರ ತಮಿಳು ಹಾಗೂ ಮುಸ್ಲೀಂ ವ್ಯಾಪಾರಿಗಳನ್ನು ಎದುರಿಸುವಲ್ಲಿ ಸಿಂಹಳ ರಾಷ್ಟ್ರಾಭಿಮಾನವು ಬೌದ್ಧ ವ್ಯಾಪಾರಿಗಳಿಗೆ ಮತ್ತು ಮಧ್ಯಮ ವರ್ಗದವರಿಗೆ ಧಾರ್ಮಿಕ ಹಾಗು ಸಾಂಸ್ಕೃತಿಕ ಅಭಿ ವ್ಯಕ್ತಿಯಾಯಿತು. ಈ ವ್ಯಾಪಾರಿವರ್ಗ ಬ್ರಿಟಿಷ್ ಆಳ್ವಿಕೆಯಲ್ಲಿ ಉನ್ನತ ಸ್ಥಾನಗಳಿಗಾಗಿ ಹರಿದು ಹಂಚಿ ಹೋದರು. ಕ್ರೈಸ್ತ ಮತಾಂತರಗೊಂಡ ಮತ್ತು ಪಶ್ಚಿಮ ರಾಷ್ಟ್ರಗಳಲ್ಲಿ ವಿದ್ಯಾಭ್ಯಾಸ ಮಾಡಿದ ಸಿಂಹಳ ಜನರಿಗೆ ಪ್ರತಿಷ್ಠಿತ ಸ್ಥಾನಗಳು ದೊರೆತವು. ಆದರೆ ಹೆಚ್ಚಾಗಿ ಸಿಂಹಳ ಆಸ್ತಿವಂತರು ಬ್ರಿಟಿಷ್ ಒಡೆಯರಂತೆಯೆ ಪ್ಲಾಂಟೇಶನ್ ಉದ್ಯಮ ದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ಇದರಿಂದಾಗಿ ಈ ವರ್ಗ ಸ್ವಾತಂತ್ರ್ಯ ಸಮರದ ನಾಯಕತ್ವದಲ್ಲಿರಲು ಸಾಧ್ಯವಾಗಲಿಲ್ಲ.

ಬ್ರಿಟಿಷ್ ಸಾಮ್ರಾಜ್ಯಶಾಹಿಯು 1825ರಲ್ಲಿ ಕ್ಯಾಂಡಿಯ ದೊರೆಯನ್ನು ಸೋಲಿ ಸುವುದರ ಮೂಲಕ ದ್ವೀಪದಲ್ಲಿ ತನ್ನ ಅಧಿಪತ್ಯವನ್ನು ಸ್ಥಿರಗೊಳಿಸಿತು. ಟೀ ಪ್ಲಾಂಟೇಶನ್‌ಗಳನ್ನು ಸ್ಥಾಪಿಸಿ, ಕನಿಷ್ಠ ಕೂಲಿಯ ಮೇಲೆ ದಕ್ಷಿಣ ಭಾರತದಿಂದ ತಮಿಳ ರನ್ನು ಕೊಂಡೊಯ್ದರು. ಇದಕ್ಕಿಂತ ಮುಂಚೆಯೆ ನೆಲಸಿದ್ದ ಮಧ್ಯಮ ವರ್ಗದ ಸಿಲೋನ್ ತಮಿಳರಿಗೆ ಬ್ರಿಟಿಷ್ ಆಡಳಿತ ವ್ಯವಸ್ಥೆಯಲ್ಲಿ ಹೆಚ್ಚಿನ ಅವಕಾಶ ದೊರೆತಿತ್ತು. ದ್ವೀಪದ ಆರ್ಥಿಕ ವ್ಯವಸ್ಥೆಗೆ ಪ್ಲಾಂಟೇಶನ್ ಕಾರ್ಮಿಕರ ಕೊಡುಗೆ ಅಪಾರ.

ಶ್ರೀಲಂಕ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಎಡಪಕ್ಷಗಳಾದ ಲಂಕ ಸಮ ಸಮಾಜ ಪಕ್ಷ (LSSP) ಮತ್ತು ಕಮ್ಯುನಿಸ್ಟ್ ಪಕ್ಷಗಳ ಪಾತ್ರ ಪ್ರಮುಖವಾಗಿತ್ತು. ಪ್ಲಾಂಟೇಶನ್ ಕಾರ್ಮಿಕರನ್ನು ಸಂಘಟಿಸಿದ್ದ ಲಂಕ ಸಮ ಸಮಾಜ ಪಕ್ಷವನ್ನು ಬ್ರಿಟಿಷ್ ಸರಕಾರ ಕಾನೂನು ಬಾಹಿರ ಗೊಳಿಸಿತು. ಎರಡನೆ ಮಹಾಯುದ್ಧದ ಸಮಯದಲ್ಲಿ ಸ್ಟಾಲಿನ್ ಆದೇಶದ ಮೇರೆಗೆ ಸ್ವಾತಂತ್ರ್ಯ ಚಳುವಳಿಯನ್ನು ಬದಿಗೊತ್ತಿ ಕಮ್ಯುನಿಸ್ಟ್ ಪಕ್ಷವು ಬ್ರಿಟಿಷ್ ಸಾಮ್ರಾಜ್ಯಶಾಹಿಯನ್ನು ಬೆಂಬಲಿಸಿದ ಪರಿಣಾಮವಾಗಿ, ಅಧಿಕಾರ ಬಂಡವಾಳ ಶಾಹಿ ವರ್ಗಕ್ಕೆ ಅನಾಯಾಸವಾಗಿ ಬ್ರಿಟಿಷ್‌ರಿಂದ ಹಸ್ತಾಂತರವಾಯಿತು. ಭಾರತದ ಕಮ್ಯುನಿಸ್ಟ್ ಪಕ್ಷ ಮಾಡಿದ್ದು ಇದೇ. ಅಧಿಕಾರ ಪಡೆದ ಯು. ಎನ್. ಪಿ. ಮಾಡಿದ ಮೊದಲ ಕಾರ್ಯವೆಂದರೆ ಕ್ಯಾಂಡಿಯ ಪ್ಲಾಂಟೇಶನ್ ಕಾರ್ಮಿಕರ ಪೌರತ್ವವನ್ನು ಕಸಿದು ಕೊಂಡಿದ್ದು ಮತ್ತು ಮತ ಚಲಾಯಿಸುವ ಹಕ್ಕುಗಳಿಂದ ವಂಚಿತಗೊಳಿಸಿದ್ದು. ಇದು ಜನಾಂಗ ದ್ವೇಷಕ್ಕೆ ಅಡಿಪಾಯ ಹಾಕಿತು. ಅಂದಿನಿಂದ ಆಳುವ ವರ್ಗ ಸಿಂಹಳ ರಾಷ್ಟ್ರಾಭಿಮಾನವನ್ನು ಬೆಳೆಸಿಕೊಂಡು ಕಾರ್ಮಿಕ ವರ್ಗದ ಐಕ್ಯಮತ್ಯವನ್ನು ಮತ್ತು ಎಡಪಕ್ಷಗಳ ಪ್ರಭಾವವನ್ನು ಮುರಿಯಲು ಹಾಗು ವರ್ಗಜಾಗೃತಿಯನ್ನು ತಡೆಯಲು ಪ್ರಯತ್ನಿಸುತ್ತಿವೆ.

1850ರ ಆದಿಯಲ್ಲಿ ಶ್ರೀಲಂಕ ಸ್ವಾತಂತ್ರ್ಯ ಪಕ್ಷ ಗ್ರಾಮಾಂತರ ಪ್ರದೇಶದ ಮಧ್ಯಮ ವರ್ಗದ ಪ್ರತಿನಿಧಿಯಾಗಿ ಹುಟ್ಟಿಕೊಂಡಿತು. "ಸಿಂಹಳ ಮಾತ್ರ" ಎಂಬ ಘೋಷಣೆ ಈ ಪಕ್ಷದ್ದಾಗಿದ್ದರೂ, ಇದರ ಮುಖ್ಯ ಪ್ರಹಾರ ಪಾಶ್ಚಾತ್ಯ ಪ್ರಭಾವ ಹೊಂದಿದ್ದ (UNP) ಪಕ್ಷದ ನಾಯಕರುಗಳ ವಿರುದ್ಧವಾಗಿತ್ತು. ಈ ಪಕ್ಷ ಅಧಿಕಾರಕ್ಕೆ ಬಂದಾಗ ತಮಿಳರ ಅನೇಕ ಬೇಡಿಕೆಗಳನ್ನು ಈಡೇರಿಸಲು ಸಿದ್ಧವಿದ್ದರು. ಈ ದಿಸೆಯಲ್ಲಿ ನಡೆದ ಬಂಡಾರನಾಯಿಕೆ—ಚಲ್ವನಾಯಕಂ ಒಪ್ಪಂದ ಜಾರಿಯಾಗಿದ್ದರೆ ತಮಿಳರ ಸಮಸ್ಯೆಗಳು ಸ್ವಲ್ಪ ಮಟ್ಟಿಗಾದರೂ ಬಗೆಹರಿಯುತ್ತಿತ್ತು. ಅಂದಿನ ಆ ಒಪ್ಪಂದವನ್ನು ವಿರೋಧಿಸಿ ಜಯವರ್ಧನೆಯವರು ತಮ್ಮ ರಾಜಕೀಯ ಹಿತಾಸಕ್ತಿಗಳಿಗಾಗಿ ಮತ್ತೊಂದು ಕೋಮುಗಲಭೆಯನ್ನು ಹುಟ್ಟು ಹಾಕಿದರು. ಅವರ ಪಕ್ಷದ ಪತ್ರಿಕೆ "ಸಿಯರ"ದಲ್ಲಿ (16. ಮೇ 1958) "ಸಿಂಹಳ ಯುವಕರೇ, ಎದ್ದೇಳಿ, ಸಿಂಹಳ ರಾಷ್ಟ್ರಕ್ಕೋಸ್ಕರ ತ್ಯಾಗಮಾಡಿ, ನಿಮಗೆ ಸಾಧ್ಯವಾದಷ್ಟು ತಮಿಳರನ್ನು ಕೊಲ್ಲಿ... ... ರಾಷ್ಟ್ರದ ಹೆಸರಿನಲ್ಲಿ ಮುನ್ನಡೆಯಿರಿ, ಕಾಲಹರಣ ಮಾಡಬೇಡಿ, ಕೊಲ್ಲಿ" ಇತ್ಯಾದಿ ಬರೆದು ಜನಾಂಗ ದ್ವೇಷಕ್ಕೆ ಮತ್ತೊಮ್ಮೆ ಕಾರಣರಾದರು.

ಯು. ಎನ್. ಪಿ. ಜನಾಂಗ ದ್ವೇಷವನ್ನು ಹೆಚ್ಚು ಮಾಡುತ್ತಿದ್ದ ಸಮಯದಲ್ಲೇ ಲಂಕ ಸಮ ಸಮಾಜ ಪಕ್ಷ ಮತ್ತು ಕಮ್ಯುನಿಸ್ಟ್ ಪಕ್ಷಗಳು ತಮಿಳರ ಹಕ್ಕುಗಳಿಗಾಗಿ ಸಂಪೂರ್ಣ ಬೆಂಬಲ ಸೂಚಿಸಿದ್ದವು. ಸಿಂಹಳ ಮತ್ತು ತಮಿಳು ರಾಷ್ಟ್ರಭಾಷೆ

ಗಳಾಗಬೇಕೆಂದು ಸಾರಿದವು. ಕಾರ್ಮಿಕವರ್ಗದ ಶಕ್ತಿ ಹಾಗೂ ಎಡಪಕ್ಷಗಳ ಪ್ರಭಾವ ಸಾಕಷ್ಟಿದುದ್ದರಿಂದ ಕೋಮುವಾದಿಗಳಿಗೆ ಹೆಚ್ಚಿನ ಕುಮ್ಮಕ್ಕು ಅರವತ್ತರ ದಶಕದ ಆದಿಯಲ್ಲಿ ದೊರೆಯಲಿಲ್ಲ. ಆದರೆ, ಕಾಲಕ್ರಮೇಣ ಶ್ರೀಲಂಕ ಸ್ವಾತಂತ್ರ್ಯ ಪಕ್ಷದೊಡನೆ (SLFP) ಸಂಯುಕ್ತ ರಂಗ ಸರ್ಕಾರದಲ್ಲಿದ್ದ ಲಂಕ ಸಮ ಸಮಾಜ ಪಕ್ಷ ಮತ್ತು ಕಮ್ಯೂನಿಸ್ಟ್ ಪಕ್ಷಗಳು ತಮಿಳರ ಮೇಲಿನ ನಿಲುವನ್ನು ತಿಳಿಗೊಳಿಸಿದರು. 1964ರಲ್ಲಿ ನಡೆದ ಸಿರಿಮಾವೋ—ಶಾಸ್ತ್ರಿ ಒಪ್ಪಂದವನ್ನು ಸಮರ್ಥಿಸಿದರು. ಇದರ ಪ್ರಕಾರ ಸುಮಾರು 10 ಲಕ್ಷ ಪ್ಲಾಂಟೇಶನ್ ತಮಿಳರನ್ನು ರಾಜ್ಯಹೀನರೆಂದು ಘೋಷಿಸಲಾಯಿತು. ಶ್ರೀಲಂಕದ ಆರ್ಥಿಕ ಏಳಿಗೆಗೆ ರಕ್ತ ಬೆವರು ಸುರಿಸಿದ ಪ್ಲಾಂಟೇಶನ್ ತಮಿಳರಿಗೆ ಈ ದೇಶ ಕೊಟ್ಟ ಬಳುವಳಿ—ಪರಕೀಯತೆ ಹಾಗೂ ನಿರಾಶ್ರಿತ ಶಿಬಿರ ! ಸುಮಾರು ನೂರೈವತ್ತು ವರ್ಷಗಳ ತರುವಾಯ ಈ ಕಾರ್ಮಿಕರು ಭಾರತಕ್ಕೆ ಮರಳಬೇಕಾಯಿತು.

ನಂತರ 1965ರಲ್ಲಿ ಅಧಿಕಾರಕ್ಕೆ ಬಂದ ಯು. ಎನ್. ಪಿ., ಬಂಡಾರನಾಯಿಕೆ–ಚೆಲ್ವನಾಯಕಂ ಒಪ್ಪಂದದ ಕೆಲವು ಭಾಗಗಳನ್ನು ಜಾರಿಗೆ ತರಬೇಕೆಂದು ಪ್ರಯತ್ನಿಸಿದಾಗ ಶ್ರೀಲಂಕ ಸ್ವಾತಂತ್ರ್ಯ ಪಕ್ಷ, ಲಂಕ ಸಮ ಸಮಾಜ ಪಕ್ಷ ಮತ್ತು ಕಮ್ಯೂನಿಸ್ಟ್ ಪಕ್ಷಗಳು ಸಿಂಹಳ ರಾಷ್ಟ್ರಾಭಿಮಾನವನ್ನು ಎತ್ತಿ ಕಟ್ಟಿದರು. ಅಂತಿಮವಾಗಿ ಈ ಪಕ್ಷಗಳು ಸಮಯ ಸಾಧಕರಾಗಿ ತಮಿಳರ ಹಿತರಕ್ಷಣೆ ಮತ್ತು ಹಕ್ಕುಗಳನ್ನು ಸಂಪೂರ್ಣವಾಗಿ ಮರೆತರು. ಭೂಸುಧಾರಣೆಯ ಕಾಲವಲ್ಲಿ ಪ್ಲಾಂಟೇಶನ್ ಕಾರ್ಮಿಕರ ಮೇಲೆ ನಡೆದ ದೌರ್ಜನ್ಯ, ತಮಿಳು ಯುವಕರ ದಮನ, ಸಾಂಸ್ಕೃತಿಕ ರಂಗದಲ್ಲಿ ತಮಿಳು–ವಿರೋಧಿ ನಿಲುವುಗಳು, ತಮಿಳು ಸಾಹಿತ್ಯ ಸಭೆಯಲ್ಲಿ ಪೋಲೀಸರ ಅತ್ಯಾಚಾರ ಇತ್ಯಾದಿಗಳು ಸಂಯುಕ್ತ ರಂಗದ ಸಮಯಸಾಧಕ ರಾಜಕಾರಣಕ್ಕೆ ಉದಾಹರಣೆಗಳು. 1971ರಲ್ಲಿ ಜನತ ವಿಮುಕ್ತಿ ಪೆರಮೂನ ಪಕ್ಷದ ನೇತೃತ್ವದಲ್ಲಿ ನಡೆದ ಉತ್ಕ್ರಾಂತಿ ಸಂಯುಕ್ತರಂಗ ಶ್ರೀಲಂಕ ಜನತೆಯ ವಿಶ್ವಾಸ ಕಳೆದುಕೊಂಡದಕ್ಕೆ ನಿದರ್ಶನ. ಭಾರತದಲ್ಲಿ ತುರ್ತು ಪರಿಸ್ಥಿತಿಯ ಸಮಯದಲ್ಲಿ ಶ್ರೀಲಂಕದಲ್ಲೂ ತುರ್ತು ಪರಿಸ್ಥಿತಿಯ ಘೋಷಣೆ, ಮತ್ತೆ ತಮಿಳು ಸಿಂಹಳ ಕಾರ್ಮಿಕರ ಶೋಷಣೆ. 1977ರಲ್ಲಿ ನಡೆದ ಚುನಾವಣೆಯಲ್ಲಿ ಶ್ರೀಲಂಕ ಸ್ವಾತಂತ್ರ್ಯ ಪಕ್ಷದ ಪರಾಭವದೊಂದಿಗೆ ಯು.ಎನ್.ಪಿ. ಮತ್ತೆ ಅಧಿಕಾರಕ್ಕೆ ಬಂದ ಮೇಲೆ ಎರಡು ಬಾರಿ ಕೋಮು ಗಲಭೆಗಳು ನಡೆದಿವೆ. ಇತ್ತೀಚಿನದು ಮೂರನೆಯದು.

ಪ್ರತಿಯೊಂದು ಹಂತದಲ್ಲೂ ಆಳುವ ವರ್ಗದ ದಮನಕ್ಕೊಳಗಾದ ತಮಿಳರಿಗೆ ಶ್ರೀಲಂಕಾದಲ್ಲಿ ನೆಲಸಿರುವುದೆ ಒಂದು ಭಯಾನಕ ವಾಸ್ತವತೆ. ಶ್ರೀಲಂಕದ ಜನಸಂಖ್ಯೆಯಲ್ಲಿ ನೂರಕ್ಕೆ ಇಪ್ಪತ್ತು (20%) ತಮಿಳರಿದ್ದರೂ, ರಾಷ್ಟ್ರೀಕೃತ ಹಾಗೂ ಖಾಸಗಿ ಉದ್ಯಮಗಳಲ್ಲಿ ಇವರಿಗೆ ಕೇವಲ 5%ರಷ್ಟು ಉದ್ಯೋಗಾವಕಾಶ, ರಕ್ಷಣಾ

ಪಡೆಗಳಲ್ಲಿ 2%. ಈ ವಾಸ್ತವತೆಯನ್ನು ಮರೆಮಾಚಲು, ತಮಿಳರಿಗೆ IGP ಹುದ್ದೆ, ನಾಲ್ಕು ರಾಜತಂತ್ರಜ್ಞರ ಹುದ್ದೆಗಳು, ಮೂರು ಮಂತ್ರಿ ಹುದ್ದೆಗಳು, ಜಾಫ್ನ ವಿಶ್ವ ವಿದ್ಯಾಲಯ, ತಮಿಳು ರಾಷ್ಟ್ರಭಾಷೆ ಇತ್ಯಾದಿಗಳ ಪ್ರದರ್ಶನ. ಈ ನಾಮಕಾವಸ್ಥೆ ಹಾಗು ಕಣ್ಣೊರೆಸುವ ತಂತ್ರಗಳು ಭಾರತದಲ್ಲಿ ಅಲ್ಪ ಸಂಖ್ಯಾತರಿಗೆ ಆಳುವ ಪಕ್ಷಗಳು ಮಾಡುತ್ತಿರುವುದನ್ನು ಜ್ಞಾಪಿಸುತ್ತದೆ. ತಮಿಳರು ಶ್ರೀಲಂಕದಲ್ಲಿ ಕೆಲವು ಉನ್ನತ ಹುದ್ದೆಗಳಲ್ಲಿದ್ದರೆ ಅದು ಅವರ ಪ್ರತಿಭೆಯಿಂದ್ ಮಾತ್ರ. ಇಂದಿನ ಪರಿಸ್ಥಿತಿಯಲ್ಲಿ ಹೆಚ್ಚಿನ ಪ್ರತಿಭೆಯ ಅಗತ್ಯ ತಮಿಳರಿಗೆ ಚೆನ್ನಾಗಿ ಗೊತ್ತು. ಸಾಮಾನ್ಯ ತಮಿಳು ಜನತೆಗೆ ಬೇಕಾದುದು ಆಫೀಸ್‌ಗಳಲ್ಲಿ, ಪ್ಲಾಂಟೇಶನ್‌ಗಳಲ್ಲಿ ಮತ್ತು ಕಾರ್ಖಾನೆಗಳಲ್ಲಿ ಮಧ್ಯಮ ದರ್ಜೆಯ ಕೆಲಸಗಳು. ಇಲ್ಲಿ ಆಗುವ ಅನ್ಯಾಯ ಇವರನ್ನು ಅಗಾಧವಾಗಿ ಕಾಡುತ್ತದೆ.

ಶ್ರೀಲಂಕದ ಆರ್ಥಿಕ ಪರಿಸ್ಥಿತಿ ತಮಿಳರ ಸಮಸ್ಯೆಯನ್ನು ಹೆಚ್ಚು ಹೆಚ್ಚು ಉಲ್ಬಣ ಗೊಳಿಸುತ್ತಿದೆ. 1950ರ ದಶಕದಲ್ಲಿ ಜಾಗತಿಕ ಆರ್ಥಿಕ ಬೆಳವಣಿಗೆಯ ಉಪಯೋಗ ಪಡೆದ ಶ್ರೀಲಂಕದ ಬಂಡವಾಳಶಾಹಿ ವರ್ಗ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ತರುವಲ್ಲಿ ಸ್ವಲ್ಪ ಮಟ್ಟಿಗೆ ಯಶಸ್ವಿಯಾಯಿತು. ಕೆಲವು ಸಮಾಜ ಕಲ್ಯಾಣ ಕಾರ್ಯಗಳನ್ನು ಮಾಡಲಾಯಿತು. ಅಕ್ಷರಸ್ಥರ ಸಂಖ್ಯೆ ಶೇ. 80ಕ್ಕೆ ಏರಿತು. ಶ್ರೀಲಂಕದ ಮುಖ್ಯ ರಫ್ತು ಸಾಮಗ್ರಿ ಟೀಗೆ ಪಶ್ಚಿಮ ರಾಷ್ಟ್ರಗಳಲ್ಲಿ ಹೆಚ್ಚಿನ ಬೇಡಿಕೆಯಿದ್ದ ಪರಿಣಾಮವಾಗಿ ಈ ಕಾರ್ಯಕ್ರಮಗಳಿಗೆ ಬೇಕಾದ ಹಣದ ಪೂರೈಕೆಯಾಗುತ್ತಿತ್ತು. ಆದರೆ ಜಗತ್ತಿನ ಆರ್ಥಿಕ ವ್ಯವಸ್ಥೆಗೆ ಅವಿಭಾಜ್ಯವಾಗಿ ಹೆಣೆಯಲ್ಪಟ್ಟಿರುವ ಶ್ರೀಲಂಕದ ಆರ್ಥಿಕ ವ್ಯವಸ್ಥೆ ವಿಶ್ವಮಾರುಕಟ್ಟೆಯ ಅನೇಕ ಏರಿಳಿತಗಳನ್ನು ಅನುಭವಿಸಬೇಕಾದದ್ದು ಅನಿವಾರ್ಯ. ಅಂತರ್ ರಾಷ್ಟ್ರೀಯ ಹಣಕಾಸು ಸಂಸ್ಥೆ (I.M.F.) ಮತ್ತು ವಿಶ್ವಬ್ಯಾಂಕುಗಳಿಂದ ಬೃಹತ್ ಸಾಲ ಪಡೆದ ಶ್ರೀಲಂಕ ತನ್ನ ನೆಲದಲ್ಲಿ ಕೃಷಿ ಹಾಗು ಕೈಗಾರಿಕೆಗಳನ್ನು ಬೆಳೆಸು ವುದರಲ್ಲಿ ವಿಫಲಗೊಂಡಿದೆ. ಪರಿಣಾಮವಾಗಿ ಆಹಾರ ವಸತಿ ಹಾಗೂ ನಿರುದ್ಯೋಗ ಸಮಸ್ಯೆಗಳು ಹೆಚ್ಚುತ್ತಲೆ ಇವೆ. ಕಳೆದ ದಶಕದಲ್ಲಿ ಟೀನ ರಫ್ತು ಗಮನಾರ್ಹವಾಗಿ ಇಳಿದಿದೆ. 1983ರಲ್ಲಿ ಅಂತರ್ ರಾಷ್ಟ್ರೀಯ ಹಣಕಾಸು ಸಂಸ್ಥೆ ಹಳೆಯ ಸಾಲ ಮುಗಿದು ಹೊಸ ಸಾಲದ ಕಂತು ಕೊಡುವ ಸಂದರ್ಭದಲ್ಲಿ ತನ್ನ ಮಾಮೂಲು ಷರತ್ತುಗಳನ್ನು—ರೂಪಾಯಿ ಅಪಮೌಲ್ಯ, ಸರ್ಕಾರಿ ವೆಚ್ಚಗಳ ಕಡಿತ ಇತ್ಯಾದಿ— ಜಯವರ್ಧನೆ ಸರ್ಕಾರದ ಮೇಲೆ ವಿಧಿಸಿತು. ಸಾಲ ಬೇಕೆಂದಲ್ಲಿ ಜನತೆಗೆ ಸಿಕ್ಕಂತಹ ಕೆಲವು ಸೌಲಭ್ಯಗಳನ್ನು ಕತ್ತರಿಸಬೇಕಾದದ್ದು ಅನಿವಾರ್ಯವೆಂದು UNP ಸರ್ಕಾರಕ್ಕೆ ಗೊತ್ತಿತ್ತು. ಪರಿಣಾಮವಾಗಿ ಮೂಡುವ ಜನತೆಯ ಆಂದೋಲನವನ್ನು ತಡೆಹಿಡಿ ಯುವ ಸಲುವಾಗಿ ಹೆಚ್ಚಿನ ಅಧಿಕಾರ ಅಥವ ಸರ್ವಾಧಿಕಾರದ ಆವಶ್ಯಕತೆ ಜಯ ವರ್ಧನೆಗೆ ಬೇಕಾಗಿತ್ತು. ಇದಕ್ಕಾಗಿಯೇ ತುರ್ತುಪರಿಸ್ಥಿತಿಯನ್ನು ಘೋಷಿಸಲಾಯಿತು. ತುರ್ತಾಗಿ ಅಧ್ಯಕ್ಷರ ಚುನಾವಣೆ ನಡೆಸಲಾಯಿತು. ಸಂವಿಧಾನವನ್ನು ಬದಲಾಯಿಸ

ಲಾಯಿತು, ಸಾರ್ವತ್ರಿಕ ಚುನಾವಣೆಗಳನ್ನು ಆರು ವರ್ಷಗಳ ಕಾಲ "ಜನಮತ"ದ ಸೋಗಿನಲ್ಲಿ ಮುಂದೂಡಲಾಯಿತು. ಜಾಫ್ನದ ತಮಿಳರ ಮೇಲೆ ಕಠೋರ ಶಾಸನಗಳನ್ನು ವಿಧಿಸಲಾಯಿತು. 1980ರಲ್ಲಿ ನಡೆದ ಸಾರ್ವತ್ರಿಕ ಮುಷ್ಕರವನ್ನು ಪೋಲಿಸ್ ಹಾಗು ಸೈನ್ಯದ ಸಹಾಯದಿಂದ ಅತ್ಯಂತ ಅಮಾನುಷವಾಗಿ ಮುರಿಯಲಾಯಿತು. ಸುಮಾರು 60,000ಕ್ಕೂ ಹೆಚ್ಚು ಕಾರ್ಮಿಕರು ಕೆಲಸ ಕಳೆದುಕೊಂಡರು. ಈ ಸೋಲಿನಿಂದ ಕಾರ್ಮಿಕವರ್ಗ ಚೇತರಿಸಿಕೊಳ್ಳುವ ಹೊತ್ತಿಗೆ ಜನಾಂಗ ದ್ವೇಷದ ಕಿಚ್ಚನ್ನು ಸಾಕಷ್ಟು ಹೆಚ್ಚಿಸಲಾಯಿತು.

1983ರಲ್ಲಿ ನಡೆದ ಗಲಭೆಗಳಲ್ಲಿ ಶ್ರೀಲಂಕಾಕ್ಕಾಗಿರುವ ಹಾನಿ ಅಪಾರ. ಸುಮಾರು 10ಕೋಟಿ ರೂಪಾಯಿಗಳಷ್ಟು ಕೈಗಾರಿಕಾ ಉಪಕರಣಗಳು ನಷ್ಟವಾಗಿದೆ. ಪ್ಲಾಸ್ಟಿಕ್, ಪೇಂಟ್ ಹಾಗೂ ಉಕ್ಕು ವಿಪರೀತ ಹಾನಿಗೊಳಗಾಗಿವೆ. ಸುಮಾರು 20,000ಕ್ಕು ಹೆಚ್ಚು ಕಾರ್ಮಿಕರು, ಹೆಚ್ಚಾಗಿ ಸಿಂಹಳೀಯರು ನಿರುದ್ಯೋಗಿಗಳಾಗಿದ್ದಾರೆ. ಎಲ್ಲಕ್ಕಿಂತ ಮಿಗಿಲಾಗಿ ಅತ್ಯಂತ ಧಕ್ಕೆಗೊಳಗಾಗಿರುವುದು ಪ್ರವಾಸೋದ್ಯಮ. ಪ್ರವಾಸಿಗಳ ಸ್ವರ್ಗವೆನಿಸಿದ್ದ ಶ್ರೀಲಂಕ ಈ ಗಲಭೆಯಿಂದ ಹೆಚ್ಚು ಪಾಲಿನ ಆದಾಯವನ್ನು ಕಳೆದುಕೊಂಡಿದೆ.

ಅಮೆರಿಕ ಸಾಮ್ರಾಜ್ಯಶಾಹಿಗೆ ಶ್ರೀಲಂಕ ಬೇಗ ಚೇತರಿಸಿಕೊಳ್ಳುವುದು ಬೇಕಾಗಿದೆ. ಹಿಂದು ಮಹಾಸಾಗರದಲ್ಲಿ ತನ್ನ ಮಿಲಿಟರಿ ನೆಲೆಯನ್ನು ಹೆಚ್ಚುಗೊಳಿಸಲು ಶ್ರೀಲಂಕದ ಟ್ರಿಂಕೋಮಲಿ ಬಂದರು ಅತ್ಯಂತ ಪ್ರಶಸ್ತ ಜಾಗ. ಜಯವರ್ಧನೆಗೆ ತನ್ನ ದೇಶವನ್ನು ಅಮೆರಿಕಕ್ಕೆ ಮಾರಿಕೊಂಡಾದರೂ ಅಧಿಕಾರದಲ್ಲಿರುವ ಛಲ.

ಈ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಿನ್ನೆಲೆಯಲ್ಲಿ ತಮಿಳರು ನ್ಯಾಯಕ್ಕಾಗಿ ಹೋರಾಟ ಮಾಡುವುದು ಐತಿಹಾಸಿಕ ಅನಿವಾರ್ಯ. ತಮಿಳು ಸಂಯುಕ್ತ ವಿಮೋಚನ ರಂಗ (TULF) ತಮಿಳು ಜನಾಂಗದ ರಾಷ್ಟ್ರೀಯ ಪ್ರಜ್ಞೆಯ ಅಭಿವ್ಯಕ್ತಿಯಾದರೂ, ಇದು ಹೆಚ್ಚಾಗಿ ತಮಿಳು ವರ್ತಕರ ಮತ್ತು ಬಂಡವಾಳಶಾಹಿಗಳ ಹಿತಾಸಕ್ತಿಗಳಿಗಾಗಿ ಹುಟ್ಟಿದ ಪಕ್ಷ. ತಮಿಳು ಪ್ರದೇಶಗಳಲ್ಲಿ ತಮಿಳು ಜನರಿಗೆ ಹೆಚ್ಚಿಗೆ ಅಧಿಕಾರ ದೊರೆತಲ್ಲಿ ಅದು ಈ ಬಂಡವಾಶಾಹಿಗಳಲ್ಲಿ ಕೇಂದ್ರೀಕೃತವಾಗುವುದರಲ್ಲಿ ಸಂಶಯವಿಲ್ಲ. ತಮಿಳು ಕಾರ್ಮಿಕರಿಗೆ ಮತ್ತು ಪ್ಲಾಂಟೇಶನ್ ಕಾರ್ಮಿಕರಿಗೆ ಆರ್ಥಿಕ ಹಾಗೂ ಸಾಮಾಜಿಕ ನ್ಯಾಯ ಈ ಪಕ್ಷದಿಂದ ದೊರೆಯುತ್ತೆಂಬುದು ಕೇವಲ ಭ್ರಮೆ. ತಮಿಳರಲ್ಲಿ ಕ್ಯಾಂಡಿ ತಮಿಳರಿಗೆ (ಪ್ಲಾಂಟೇಶನ್ ಕೂಲಿಗಳು) ದಲಿತರ ಸ್ಥಾನ.

ತಮಿಳರ ಶಾಂತಿಯುತ ಹೋರಾಟಗಳು ಫಲ ನೀಡದೆ ಹೋಗಿರುವುದರಿಂದ ಉಗ್ರ ಸ್ವರೂಪ ತಾಳುತ್ತಿರುವುದು ಸಹಜ. ಗೆರಿಲ್ಲ ಚಟುವಟಿಕೆಗಳು ಯುವಕರನ್ನು

ಆಕರ್ಷಿಸುವುದು ಈ ಬೆಳವಣಿಗೆಯ ಸೂಚಕ. ತಮಿಳು ಟೈಗರ್‍ಸ್‌ನ ಚಟುವಟಿಕೆಗಳು ಹತಾಶೆಯ ಹಂತವನ್ನು ಸೂಚಿಸುತ್ತದೆ. ಇಡೀ ದುಡಿಯುವ ವರ್ಗವನ್ನು ತಮಿಳರ ನ್ಯಾಯಕ್ಕಾಗಿ ಒಂದುಗೂಡಿಸದಿದ್ದಲ್ಲಿ ಬಂಡವಾಳಶಾಹಿ ವರ್ಗ ತನ್ನ ಅಸ್ತಿತ್ವವನ್ನು ಮುಂದುವರಿಸಲು ಇದನ್ನೆ ಬಂಡವಾಳವನ್ನಾಗಿ ಮಾಡಿಕೊಳ್ಳಬಹುದು. ಗೆರಿಲ್ಲ ತಂತ್ರಗಳು ತಮಿಳರ ಸಮಸ್ಯೆಗೆ ಉತ್ತರ ಕಂಡುಹಿಡಿಯಬಲ್ಲದು ಎಂಬುದು ಕೇವಲ ಭ್ರಮೆ. ಭೌಗೋಲಿಕವಾಗಿ ಕೂಡ ಜಾಫ್ನ ಈ ಚಟುವಟಿಕೆಗಳಿಗೆ ಸಹಾಯಕವಾಗಿಲ್ಲ.

ಶ್ರೀಲಂಕದ ದುಡಿಯುವ ವರ್ಗ ಅಧಿಕಾರಕ್ಕೆ ಬಂದಲ್ಲಿ ಮಾತ್ರ ತಮಿಳರಿಗೆ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸಮಾನತೆ ದೊರೆಯಲು ಸಾಧ್ಯ. ಅತ್ಯಂತ ನಿಶ್ಶಕ್ತವಾಗಿರುವ ಶ್ರೀಲಂಕದ ಬಂಡವಾಳಶಾಹಿಗಳು ಸಮಾಜವನ್ನು ವಿಕಾಸಗೊಳಿಸಲು ಸಾಧ್ಯವಿಲ್ಲ. ಬದಲಾಗಿ ಅಧಿಕಾರದಲ್ಲುಳಿಯಲು ಈ ವರ್ಗ ಎಷ್ಟು ಕ್ರೂರವಾಗಬಲ್ಲದು ಎಂಬುದನ್ನು ಶ್ರೀಲಂಕದ ಘಟನೆಗಳು ತೋರಿಸಿಕೊಟ್ಟಿವೆ.

ತುಳಿತಕ್ಕೀಡಾದವರು ಜಗತ್ತಿನ ನಾಯಕರು ಮತ್ತು ನೇರ ವಾರಸುದಾರರು ಆಗಬೇಕೆಂದು ನಾವು ಇಚ್ಛಿಸಿದ್ದೇವೆ.

—ಕುರಾನ್

# ಅಂದು ಲೇಖಕಿ ಇಂದು ?

—ಎಚ್. ಎಸ್. ಚಂಪಾವತಿ

ಕನ್ನಡದ ಹಲವು ಪ್ರಮುಖ ನವ್ಯ ಸಾಹಿತಿಗಳಿಂದ ಮೆಚ್ಚುಗೆ ಪಡೆದು ಸಾಹಿತ್ಯದಲ್ಲಿ ಗುರುತಿಸಲ್ಪಟ್ಟ ರಾಜಲಕ್ಷ್ಮಿ ಎನ್. ರಾವ್ ಸಾಹಿತ್ಯಾಸಕ್ತರಿಗೆ ಒಬ್ಬ ನಿಗೂಢ ವ್ಯಕ್ತಿಯಾಗಿಯೇ ಉಳಿದಿದ್ದರಿಂದ ಅವರ ಬಗೆಗಿನ ಕಲ್ಪನೆಗಳು ನಾನಾ ಬಗೆಯವು. 1956ರ ಸಂದರ್ಭದಲ್ಲಿ ಕ್ರೂರ ಮನಸ್ಸಿನ ಕ್ರೌರ್ಯಗಳು, ಸೂಕ್ಷ್ಮಮನಸ್ಸಿನ ವೇದನೆಗಳು, ಬಳಲಿಕೆಗಳು, ಸಂಸಾರದ ಕ್ಷುದ್ರತೆಗಳು, ದಾಂಪತ್ಯದ ವಿರಸ-ಸರಸಗಳು, ಹೆಣ್ಣು ಗಂಡಿನ ಸಂಬಂಧದ ಘರ್ಷಣೆಗಳು. ಸೂಕ್ಷ್ಮ ಹಾಗೂ ಸ್ವತಂತ್ರ ಮನಸ್ಥಿತಿಯ ಹೆಂಗಸರ ಚಿತ್ರಣಗಳ ಬಗ್ಗೆ ಎಲ್ಲಾ ಲೇಖಕಿಯರಿಗಿಂತ ಭಿನ್ನವಾಗಿ ನಿಂತು 'ಸಂಗಮ' ಕಥಾ ಸಂಕಲನದಲ್ಲಿ ಸಂವೇದಿಸಿದ ರಾಜಲಕ್ಷ್ಮಿಯವರ ಒಟ್ಟು ಬದುಕು ಒಂದು ರೀತಿಯ ಬೆರಗು ಹುಟ್ಟಿಸುವುದಲ್ಲದೇ ತೀವ್ರ ಪ್ರಶ್ನೆಗಳಿಗೆ ಎಡೆಮಾಡಿಕೊಡುತ್ತದೆ. ಬೆಂಗಳೂರಿಗೆ ಇತ್ತೀಚೆಗೆ ಕೆಲವು ದಿನಗಳು ಭೇಟಿ ಇತ್ತ ರಾಜಲಕ್ಷ್ಮಿಯವರ ಬದುಕಿನ ಆಲೋಚನೆಗಳು ಸಾಹಿತ್ಯ ಲೋಕದಿಂದ ಬೇರೆಡೆಗೆ ತಿರುಗಿವೆ. ಅವರ ವೈಯಕ್ತಿಕ ಬದುಕಿನ ಬಗೆಗೆ ಹಾಗೂ ಅವರ ಸಾಹಿತ್ಯ ಓದಿ ಅವರ ಬಗ್ಗೆ ಕುತೂಹಲ ಹೊಂದಿದ್ದ ನಾನು ಅವರನ್ನು

---

ರಾಜಲಕ್ಷ್ಮಿ ಎನ್. ರಾವ್‌ರವರ ತಮ್ಮ 'ಸಂಗಮ' ಕಥಾ ಸಂಕಲನದ ಮೂಲಕ ಕನ್ನಡ ಸಾಹಿತ್ಯದಲ್ಲಿ ಸ್ಥಾನವನ್ನು ಪಡೆದುಕೊಂಡವರು. ಹಿಂದೆ ಕನಸಿಗೊಂದು ಕಣ್ಣಲ್ಲಿ ಇವರ ಬಗ್ಗೆ ಪ್ರಸ್ತಾಪಿಸಿದಾಗ 'ಸಂಗಮ' ಸಂಕಲನ ಪಡೆಯಲು ತುಂಬ ಪತ್ರಗಳು ಬಂದವು. ಆದರೆ ಈಗ ಆ ಸಂಕಲನದ ನೆನಪಿನಿಂದಲೂ ರಾಜಲಕ್ಷ್ಮಿಯವರು ದೂರ ಉಳಿದಿದ್ದಾರೆ. ಇತ್ತೀಚೆಗೆ ಎಷ್ಟೋ ವರ್ಷಗಳ ನಂತರ ಬೆಂಗಳೂರಿಗೆ ಬಂದಾಗ ಅವರನ್ನು ಭೇಟಿಯಾಗುವ ಅವಕಾಶವನ್ನು ರಾಮಚಂದ್ರಶರ್ಮರವರು ದೊರಕಿಸಿಕೊಟ್ಟರು.

ರಾಜಲಕ್ಷ್ಮಿಯವರ ಭೇಟಿ ಒಂದು ಸ್ಮರಣೀಯ ಅನುಭವ. ನಿಜವಾಗಿಯೂ ತಲೆ ಕೆಡಿಸಿಕೊಂಡವರಲ್ಲಿ ವೆಂಕಟಲಕ್ಷ್ಮಿ ಬಿ. ಎಸ್., ನಿರ್ಮಲಾರೆಡ್ಡಿ. ಹೀಗೆ ತಲೆಕೆಡಿಸಿಕೊಂಡ ಮತ್ತೊಬ್ಬ ಹುಡುಗಿ ಚಂಪಾವತಿ. ಚಂಪಾವತಿಯವರು ರಾಜಲಕ್ಷ್ಮಿಯವರೊಡನೆ 'ನಾನು ಮತ್ತು ಅಹಂ' ಬಗ್ಗೆ ಚರ್ಚಿಸಿದ ಕೆಲವು ವಿಷಯಗಳನ್ನು ಇಲ್ಲಿ ದಾಖಲುಗೊಳಿಸುತ್ತಿದ್ದೇವೆ. ಮುಂದೆ ಸಮಯ ಸಿಕ್ಕಿದರೆ ಕನಸಿಗೊಂದು ಕಣ್ಣಲ್ಲಿ ದೀರ್ಘವಾಗಿ ಪ್ರಸ್ತಾಪಿಸುವ ಯೋಚನೆಯಿದೆ.

ಸಂ :

ಭೇಟಿಯಾವದ್ದು ಸಹ ಆ ಕೂತೂಹಲದಿಂದಲೇ. ಭೇಟಿಯಾಗುವ ಸಂದರ್ಭದಲ್ಲೇ ಹಾದಿಯಲ್ಲಿ ಕಂಡ ಅಪಘಾತದಲ್ಲಿ ಸತ್ತ ಯುವಕನಲ್ಲಿ, ಹಾಗೂ ಅದೇ ತಾನೇ ಬೈಕ್ ಅಪಘಾತದಲ್ಲಿ ನಾಲ್ಕು ದಿನ ಆಸ್ಪತ್ರೆಯಲ್ಲಿ ಸತ್ತು ಬದುಕಿದ ನನಗೆ, ಎಲ್ಲಾ ಕ್ರಾಂತಿಕಾರಿ ಚಟುವಟಿಕೆಗಳು, ಸಂಬಂಧಗಳ ಮಧ್ಯವೂ ಧುತ್ತೆಂದು ಕಾಡುವ ಸಾವು, ಏಕಾಂಗಿತನದ ಪ್ರಶ್ನೆಗಳು ತ್ರೀವವಾಗಿ ಕಾಡುತ್ತಿದ್ದುದರಿಂದ ರಾಜಲಕ್ಷ್ಮಿಯವರನ್ನು ಭೇಟಿಯಾದಾಗಲೂ ಸಹ ಮಾತು ಪ್ರಾರಂಭವಾದದ್ದು ಸಾವಿನಿಂದಲೇ. ರಾಜಲಕ್ಷ್ಮಿಯವರ ಪ್ರಸ್ತುತ ವಿಚಾರಗಳನ್ನು ಹೀಗೆ ಸಂಗ್ರಹಿಸಬಹುದು.

ಸಾಯುತೀವಿ ಅಂದ್ರೆ ಈ ಶರೀರ ಹೋಗುತ್ತೆ ಅನ್ನೋದರಿಂದಲೇ ನಮ್ಮ ಬದುಕು ಪ್ರಾರಂಭವಾಗಬೇಕು. ಪ್ರತಿ ಮಾತಿಗೂ ನಾನು ಅಂತ ಹೇಳ್ತೀವೆ, 'ನಾನು' ಅನ್ನೋದು ಅಹಂಕಾರವಾಗುತ್ತೆ. 'ನಾನು' ಅನ್ನೋ 'established Ego' transcend ಮಾಡೋದು ಅಗತ್ಯವಾಗುತ್ತೆ, ಈ ಶರೀರ, ಮನಸ್ಸು, ಬುದ್ಧಿ, ಅವಯುವಗಳು, ಪಂಚೇಂದ್ರಿಯಗಳು ಎಲ್ಲವೂ ಅಹಂಕಾರ ಬೆಳೆಸುತ್ತೆ. 'ನಾನು' ಅನ್ನುವಾಗ ಇವೆಲ್ಲವುಗಳ ಜೊತೆ ನನ್ನನ್ನ ಗುರುತಿಸಿಕೊಳ್ತಾ ಇರ್ತೇನೆ. ಈ ಸಮಾಜ ನನ್ನನ್ನು condition ಮಾಡಿರುತ್ತೆ. 'ಅಹಂ' ಅನ್ನೋದು ನಮ್ಮಲ್ಲಿ ಚಿಕ್ಕಂದಿನಿಂದ ಬೆಳೆದುಕೊಂಡೇ ಬಂದಿರುತ್ತೆ. ಚಿಕ್ಕಂದಿನ 'ಅಹಂ' ಯೌವನದ 'ಅಹಂ' ವಿವಿಧ ರೂಪಗಳಲ್ಲಿರುತ್ತದೆ. ಆದರೆ ಶರೀರ, ಬುದ್ಧಿ, ಮನಸ್ಸು, ಅವಯುವಗಳು, ಪಂಚೇಂದ್ರಿಯಗಳು ಹಾಗೂ 'ನಾನು' ಬೇರೆ ಬೇರೆಯಾಗಬೇಕು. ಆಗ ಅವು 'ವಸ್ತು' ಆಗುತ್ತವೆ. ಹೆಚ್ಚು ಹೆಚ್ಚು ಇವುಗಳ ಬಗ್ಗೆ ನಾವು ಯೋಚಿಸುತ್ತಾ ಹೋಗುವಾಗ ಎಲ್ಲವೂ ಬೇರೆ ಬೇರೆ ಅನ್ನಿಸುತ್ತವೆ. ಶರೀರ 'ವಸ್ತು' ಅನ್ನಿಸಿದಾಗ ಅದರ ಬಗ್ಗೆಗಿನ ವ್ಯಾಮೋಹ ಕಳಚುತ್ತೆ. ಹಾಗೆಯೇ ಮನಸ್ಸು ಬುದ್ಧಿ, ಪಂಚೇಂದ್ರಿಯಗಳು. ಹೀಗೆ ಪ್ರತಿಯೊಂದನ್ನು 'ವಸ್ತು' ವಿನ ರೂಪದಲ್ಲಿಡುತ್ತಾ ಹೋಗುವಾಗ 'ನಾನು' ಏನು ಅನ್ನುವ ಹುಡುಕುವಿಕೆ ಪ್ರಾರಂಭವಾಗುತ್ತೆ. ಪ್ರತಿಫಲ ನಿರೀಕ್ಷಿಸದೇ ಕೆಲಸ ಮಾಡಬೇಕು. ನನಗೆ ಕಾಣಿಸೋದು ಏನು ಅದೆಲ್ಲ 'ವಸ್ತು' ವಾಗುತ್ತೆ. ಕಾಣದೇ ಇರೋದೆಲ್ಲ 'abstract' ಆಗುತ್ತೆ. ಇದನ್ನ ಸ್ಪಷ್ಟಮಾಡಿಕೊಳತಾ ಹೋಗಬೇಕು. ನಮ್ಮ 'ಅಹಂ' ನ ಪ್ರತಿಯೊಂದು ಭಾಗವನ್ನು ಬಗೆದು ಬಗೆದು ನೋಡಬೇಕು. ಈ 'ಶುದ್ಧ ಪ್ರಜ್ಞೆ', 'ಸತ್ಯ'ಗಳ ಹುಡುಕಾಟ ಪ್ರತಿಫಲಾಪೇಕ್ಷೆಗಳಿಲ್ಲದೇ ಪ್ರಾರಂಭವಾಗಬೇಕು. ನಮ್ಮ ಶರೀರ, ಮನಸ್ಸು, ಪಂಚೇಂದ್ರಿಯಗಳು. ಒಟ್ಟು, ಅವಯುವಗಳು ತಾದಾತ್ಮ ಹೊಂದುತ್ತವೆ. ಈ ಸ್ಥಿತಿ 'ಸಾಯುವ' ಸ್ಥಿತಿಯಲ್ಲ. ನಾನಲ್ಲದ ಎಲ್ಲರ ಬಗ್ಗೆ ಕಾಳಜಿ ಮಾಡುವ ಸ್ಥಿತಿ. ಎಲ್ಲರ ಬಗ್ಗೆ ಗಮನ ಹೋಗುತ್ತಾ ಮಾಡೊ ಕೆಲಸಾನ ತುಂಬು ಹೃದಯದಿಂದ ಮಾಡಬಹುದು. ಸಮಾಜ ಹೇರಿರೋ ಒತ್ತಡಗಳನ್ನು, 'ನಾನು'

ಅನ್ನೋ 'ಅಹಂ' ನ ವಿವಿಧ ರೂಪಗಳನ್ನು, ಆಳವಾಗಿ 'ನಾನು' ಅನ್ನೋ ನನ್ನ ಅವಯುವ, ಶರೀರ, ಮನಸ್ಸು, ಬುದ್ಧಿ, ಪಂಚೇಂದ್ರಿಯಗಳಿಂದ ಬಿಡಿಸಿಕೊಳ್ಳುವ ಶುದ್ಧ ಪ್ರಜ್ಞೆ ಮುಚ್ಚುವ ಹಂತದಲ್ಲಿ, ಬದುಕನ್ನು ಪ್ರೀತಿಸೋದನ್ನು ಕಲಿಯಬಹುದು. ಯಾವ ರೀತಿಯ ಬಂಧನ, ಒತ್ತಡಗಳಿಲ್ಲದೇ ಬದುಕು ಪ್ರೀತಿಸೋದು ಸಾಧ್ಯವಾಗುತ್ತೆ. 'ನಾನು' ಅನ್ನೋವಾಗ ಹೇಗೆ ನನ್ನ ಶರೀರ, ಬುದ್ಧಿ, ಪಂಚೇಂದ್ರಿಯಗಳಲ್ಲಿ ನನ್ನನ್ನೆ ಗುರುತಿಸಿಕೊಳ್ಳೋದು ಅಭ್ಯಾಸವಾಗಿ ಬಿಟ್ಟಿರುತ್ತದೋ ಹಾಗೆಯೇ ಇವೆಲ್ಲವುಗಳ ಜೊತೆಗಿನ 'detachment' ಕೂಡಾ ಅಭ್ಯಾಸವಾಗಬೇಕು. ಈ ರೀತಿಯ 'detachment' ನಲ್ಲಿ ನನ್ನ ಶರೀರ, ಮನಸ್ಸು, ಬುದ್ಧಿ ಪಂಚೇಂದ್ರಿಯಗಳ ಜೊತೆಗಿನ ತಾದಾತ್ಮ್ಯ ಸಾಧ್ಯವಾದಾಗ ಬದುಕು ಸುಂದರವಾಗುತ್ತೆ. ಶುದ್ಧ ಪ್ರಜ್ಞೆಯನ್ನು ಬೆಳೆಸಿಕೊಳ್ಳುವುದನ್ನು ಅಭ್ಯಾಸ ಮಾಡುತ್ತಾ ಹೋಗುವಾಗ ನಿರಪೇಕ್ಷೆ ತಾನಾಗಿಯೇ ಬೆಳೆಯುತ್ತದೆ. ಪ್ರಶ್ನಿಸದೇ ಇದ್ದಾಗ ಯಾವುದೂ ಕಾಡೋಲ್ಲ. ಪ್ರಶ್ನಿಸುತ್ತಾ, ಶೋಧಿಸುತ್ತಾ ಹೋಗಬೇಕು. ಶುದ್ಧ ಪ್ರಜ್ಞೆ, ಸತ್ಯಗಳನ್ನೆ ಶೋಧಿಸುತ್ತಾ ಹೋಗಬೇಕು. ಈ ಹಂತದಲ್ಲಿ ಬದುಕು ನಿರಪೇಕ್ಷೆಯುಳ್ಳದ್ದಾಗಿರುತ್ತದೆ.

ಈ ನಿರಪೇಕ್ಷೆಯನ್ನರಸಿಯೆ, 'ಅಹಂ' ನಿಂದ ಬಿಡಿಸಿಕೊಳ್ಳುವಾಸೆಯಲ್ಲಿಯೇ ರಾಜಲಕ್ಷ್ಮಿ ತಮ್ಮ 24-25 ರ ವಯಸ್ಸಿನಲ್ಲಿ ಸಂಸಾರ ತ್ಯಜಿಸಿದ್ದು ಒಬ್ಬ ಸಾಧುವಿನ ಪರಿಚಯದಿಂದ. ಆತ ಭಕ್ತ್ಯೋಪಾಸಕ. ಉತ್ತರಕಾಶಿ, ದೆಹಲಿ, ಪೂನಂ, ಮಾಚಲೀ ಪಟ್ಟಣಗಳಲ್ಲಿ ಇಲ್ಲಿಯವರೆಗಿನ ಬದುಕು. ಈ ತಪಸ್ಸಿನ ಹಂತದಲ್ಲಿಯೇ ಉದ್ಭವಿಸಿದ ಈ ಎಲ್ಲಾ ವಿಚಾರಗಳನ್ನು, ವಿಶೇಷವಾಗಿ 'ಅಹಂ' ನ್ನು ಕುರಿತು ಮಾತನಾಡುವಾಗ ಇವರು ಉಪಯೋಗಿಸುವ ಪದಗಳು-ಸಾಕ್ಷಾತ್ಕಾರ, ಆತ್ಮ, ದೃಷ್ಟ, ದೃಶ್ಯ, ಉಪಾಸನೆ, ಆತ್ಮ-ಅನಾತ್ಮ, ರಾಗ, ದ್ವೇಷ, ಮುಂತಾದವುಗಳು ರಾಜಲಕ್ಷ್ಮಿಯವರು ಪೂರ್ಣವಾಗಿ ಸಾಂಪ್ರದಾಯವಾದಿತ್ವದ ವೇದಾಂತಿ ಎನ್ನುವ ಗುಮಾನಿ ಮೇಲ್ನೋಟಕ್ಕೆ ಬಹುಜನರಿಗೆ ಅನ್ನಿಸುತ್ತದೆ. ಜೊತೆಗೆ ಒಂದು ಕಾಲಕ್ಕೆ ಆಧುನಿಕ ಮನಸ್ಸಿನ ಸೂಕ್ಷ್ಮತೆ ಹೊಂದಿದ್ದ ಲೇಖಕಿ ಈಗ ಜೀವನದಲ್ಲಿ ವಿಮುಖ ಹೊಂದಿದವರು ಎನ್ನುವ ಸಾಧ್ಯತೆಗಳೂ ಕಾಣುತ್ತಿದೆ. ಸಂಸಾರ ಬಿಟ್ಟ ಕೆಲವು ವರ್ಷಗಳಲ್ಲಿ ಮಗು ಮತ್ತೆ ತಮ್ಮ ಜೊತೆಗೆ ಬಂದಿರ ಬೇಕಾದ ಸಂದರ್ಭ, ಮತ್ತೆ ಹಲವು ದಿನಗಳಲ್ಲೇ ತಾನು ಅಪ್ಪನೊಡನೆಯೇ ಇರುತ್ತೇನೆ ಎಂದು ಮಗು ಪ್ರತಿಕ್ರಿಯಿಸಿದ ಅನುಭವವನ್ನೂ. ತಮ್ಮ ತಾಯಿ ಸತ್ತಾಗ, ಒಂದು ರೀತಿಯ ಹೊರೆ ಕಳಚಿ, ಸ್ವತಂತ್ರಳು ಅನ್ನಿಸಿದ ಅನುಭವವನ್ನು ರಾಜಲಕ್ಷ್ಮಿಯವರು ನಿರ್ವಿಕಾರವಾಗಿಯೇ ನುಡಿಯುತ್ತಾರೆ. ಬದುಕು ಅಂದರೆ ಹುಟ್ಟೋದು, ಸಾಯೋದು, ಬದುಕೋದು . . . ಇತ್ಯಾದಿಗಳ ಯಾಂತ್ರಿಕತೆಯಲ್ಲಿಯೇ ತಮಗೆ ಹೊಸ ಬದುಕನ್ನು ಶೋಧಿಸುವ ಹಂಬಲ ಹುಟ್ಟಿದ್ದು, ಹಾಗೂ ಸಂಸಾರ ತ್ಯಜಿಸಲಿಕ್ಕೆ ಪ್ರೇರೇಪಿಸಿದ್ದು ಅನ್ನುವ ರಾಜಲಕ್ಷ್ಮಿಯವರು ಹೀಗೆ ಮನೆಬಿಟ್ಟರೂ ಸಹ ಯಾವುದೇ ರೀತಿಯ ಆರ್ಥಿಕ

ತೊಂದರೆ ತಮಗೆ ಉಂಟಾದುದಿಲ್ಲ ಎನ್ನುತ್ತಾರೆ. ಅಗತ್ಯ ಬೇಡಿಕೆಗಳು ನೆರವೇರಿದು ಒಳ್ಳೆಯ ಸ್ನೇಹಿತರಿಂದ. ಬದುಕಿನ ಬಗ್ಗೆಗಿನ ಅತೃಪ್ತಿಗಳು ಆತ್ಮಹತ್ಯೆಗೆ ಅಥವಾ ಹುಚ್ಚುತನಕ್ಕೆ ಪ್ರೇರೇಪಿಸುತ್ತವೆ. ಆದರೆ ತಮ್ಮ ಬದುಕಿನ ಅತೃಪ್ತಿ ಈಗಿನ ಜೀವನಕ್ಕೆ ಕಾರಣ ಎನ್ನುವ ಅವರು ಹಿಂದಿನದನ್ನೆಲ್ಲ ಸ್ಪಷ್ಟವಾಗಿ ಜ್ಞಾಪಕಮಾಡಿಕೊಳ್ಳಲು ಸಾಧ್ಯ ವಿಲ್ಲ ಎನ್ನುತ್ತಾರೆ. ಅದಕ್ಕೆ ಕಾರಣ ಒಡಮೂಡಿರುವ ನಿರಪೇಕ್ಷೆ. ಇಷ್ಟು ದೀರ್ಘ ವಾಗಿ ಮಾತನಾಡಿದ ಮೇಲೆ ಮತ್ತೆ 'ಸಾಹಿತ್ಯ ಲೋಕಕ್ಕೆ' ಬರುತ್ತೀರಾ ಎನ್ನುವ ಪ್ರಶ್ನೆ ಅಸಂಗತ ಎನ್ನಿಸಿದರೂ ಕೇಳಲೇಬೇಕಾಗಿ ಬಂದಾಗ, ಆ ರೀತಿಯ ಆಸೆಯೇ ತಮ್ಮ ಲ್ಲಿಲ್ಲ ಎಂಬುದು ಅವರ ಉತ್ತರ. ಜೊತೆಗೆ ನಿರಪೇಕ್ಷೆಯ ಹಂತ ತಲುಪುವ, 'ಅಹಂ' ಕಳೆದುಕೊಳ್ಳುವ 'ಚಿತ್ತ ಶುದ್ಧಿ' ಯಲ್ಲಿ ಯಾವ ಕೆಲಸಕ್ಕೆ ತೊಡಗಿಸಿಕೊಂಡರು ಪೂರ್ಣ ಯಾಗಿ ತೊಡಗಿಸಿಕೊಳ್ಳುವ ಸಾಧ್ಯತೆಗಳನ್ನು ಕುರಿತು ಮಾತನಾಡುವ ಇವರು ಆ ಹಂತ ಗಳನ್ನು ತಲುಪುವ ಮಾರ್ಗ ಯಾವುದೇ ಆಗಿರಬಹುದು ಎನ್ನುತ್ತಾರೆ. ಅವರು ಬಳಸಿದ ಮಾರ್ಗ ಸಂಸಾರ ತ್ಯಜಿಸಿ, ಬಂಧನಗಳಿಂದ ದೂರ ಆಗಿ ಉತ್ತರ ಕಾಶಿ, ಮಚಲೀಪಟ್ಟಣ, ಪೂನಾದ ಪ್ರದೇಶಗಳಲ್ಲಿ. ಆದರೆ ಈ ಸತ್ಯ ಶೋಧನೆ ನೀವು ತೊಡಗಿರೊ ಕೆಲಸಗಳಲ್ಲೇ ಪ್ರಾರಂಭವಾಗಬಹುದು ಎಂಬುದು ಅವರ ಅಭಿಮತ. ಸಮಾಜದ ಮಧ್ಯದಲ್ಲೇ ಈ ಪ್ರಯತ್ನದ ಬಗ್ಗೆ ಮತ್ತೆ ಮತ್ತೆ ಪ್ರಶ್ನಿಸಿದಾಗ ಇವರು ಅನುಮಾನ ವ್ಯಕ್ತಪಡಿಸಿದರೂ ತಳ್ಳಿ ಹಾಕುವ ಪ್ರವೃತ್ತಿಯಿರಲಿಲ್ಲ.

ಬದುಕಿನ ಹಲವಾರು ಸಾಧ್ಯತೆಗಳಿಗೆ ಸ್ಪಂದಿಸುವ ಸೃಜನಶೀಲ ಮನಸ್ಸುಗಳಿಗೆ ಇವರ ಬದುಕು-ವಿಚಾರಗಳು ಹಲವಾರು ಪ್ರಶ್ನೆಗಳನ್ನೆತ್ತಬಹುದು.

ಉತ್ತರಕಾಶಿ, ಮಚಲೀಪಟ್ಟಣದಂತಹ ಪ್ರದೇಶಗಳಲ್ಲಿ ತಪಸ್ಸಿನಲ್ಲಿಯೇ ಈ ರೀತಿಯ ಶೋಧನೆಯ ಅಗತ್ಯವಿದೆಯೇ ?

ಆತ್ಮಹತ್ಯೆ, ಹುಚ್ಚುತನದಂತಹ ಪ್ರಶ್ನೆಗಳಿಗೆ ಇದು ಅನಿವಾರ್ಯ ಸಾಧ್ಯತೆಯೇ ?

ಬದುಕಿಗೆ ವಿಮುಖವಾಗುವ ಪ್ರವೃತ್ತಿಯೇ ?

ಸಂಪ್ರದಾಯಕ್ಕೆ ಶರಣಾಗುವ ಸಿದ್ಧತೆಯೆ ?

ಈ ನಿರಪೇಕ್ಷೆಯ ಸತ್ಯ ಎಲ್ಲಾ ಕಡೆ ಸಾಧ್ಯವೇ ?

ಈ ನಿರಪೇಕ್ಷೆ ಅನಿವಾರ್ಯವೇ ?

ಅಥವಾ ಬದುಕಿನ ಸಾಧ್ಯತೆಗಳಲ್ಲಿ ಇದೂ ಒಂದು ಸಾಧ್ಯತೆಯೇ ?

ಈ ಎಲ್ಲಾ ಅನುಮಾನಗಳ ಧ್ವನಿಯಲ್ಲಿಯೇ ಈ ಲೇಖನ ನಿಲ್ಲಿಸುತ್ತಿದ್ದೇನೆ.

●

# ಒಳ ನೋಟ

ಪ್ರಿಯ ಶೂದ್ರ,

ಮಾರ್ಚ್ ಸಂಚಿಕೆಯಲ್ಲಿ ನಮ್ಮ ಪ್ರೀತಿಯ ನಿಸಾರ್ ಅಹಮದ್ ಅವರಿಗೆ ನೀನು ಬರೆದ ಪತ್ರ ಓದಿದೆ. ಅದು ನಮ್ಮೆಲ್ಲರನ್ನು ಉದ್ದೇಶಿಸಿ ಮತ್ತು ನನ್ನನ್ನೇ ಉದ್ದೇಶಿಸಿ ಬರೆದ ಪತ್ರವೆನಿಸಿತು. ಪತ್ರದ ಅಂತರಾಳದಲ್ಲಿ ಸುಳಿದಾಡುವಾಗ ಕಣ್ಣಲ್ಲಿ ಹನಿ ನೀರು ಬಂದರೂ ಒಂದು ರೀತಿಯ ಸಮಾಧಾನವಾಗುವುದು. ಎಲ್ಲ ರೀತಿಯಿಂದಲೂ ಹದಗೆಡುತ್ತಿರುವ ಈ ಸಾಂಸ್ಕೃತಿಕ ಸಂದರ್ಭದಲ್ಲಿ ನೀನು ನಮ್ಮೆಲ್ಲರ ಬಗ್ಗೆ ಇಷ್ಟೊಂದು ಕಾಳಜಿಯಿಂದ ಮಾತಾಡುವುದು ನನಗೆ ನಿಜಕ್ಕೂ ಸಂತೋಷದ ವಿಷಯ.

ನಿಸಾರ್ ಅವರು ಭೇಟಿಯಾದಾಗಲೆಲ್ಲ ನನ್ನನ್ನು ಮನೆಗೆ ಆಹ್ವಾನಿಸಿದ್ದಾರೆ. ನಾವು ಕಾವ್ಯ ಮತ್ತು ಭಾಷೆಯ ವಿಚಾರವನ್ನು ಬಿಟ್ಟು ಬೇರೇನನ್ನೂ ಮಾತಾಡಿಲ್ಲ. ಅವರು ಅಕಾಡೆಮಿ ಅಧ್ಯಕ್ಷರಾಗುವ ಹಿಂದಿನ ದಿನ ಅವರ ಮನೆಗೆ ಹೋಗುವ ದೃಢ ನಿರ್ಧಾರ ಮಾಡಿದ್ದೆ (ಅನೇಕ ಸಲ ಹೇಳಿ ತಪ್ಪಿಸಿದ್ದರ ಬಗ್ಗೆ ತೀವ್ರ ನಾಚಿಕೆ ಮತ್ತು ಆತಂಕದಿಂದಾಗಿ ಎಂಥದೇ ಪ್ರಸಂಗದಲ್ಲಿ ಆಲಸಿಯಾಗದೆ ಹೋಗಬೇಕೆಂದಿದ್ದೆ) ಆದರೆ ಸುದ್ದಿ ತಿಳಿದಕೂಡಲೇ ನಿರ್ಧಾರ ಬದಲಿಸಿದೆ. ಇದು ನನ್ನ ಸಣ್ಣತನವನ್ನೇ ತೋರಿ

---

ಕಳೆದ ಸಂಚಿಕೆಯಲ್ಲಿ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಿಗೆ ತುಂಬ ಸಂಕೋಚದಿಂದಲೇ ಬರೆದ ಪತ್ರವನ್ನು ಆತ್ಮೀಯವಾಗಿ ಸ್ವೀಕರಿಸಿ ಮೆಚ್ಚಿಗೆ ಸೂಚಿಸಿದ ಎಲ್ಲರಿಗೂ ಋಣಿಯಾಗಿದ್ದೇನೆ. ಇದಕ್ಕೆ ಸಂಬಂಧಿಸಿದ ಕೆಲವು ಪತ್ರಗಳನ್ನು ಇಲ್ಲಿ ದಾಖಲುಗೊಳಿಸುತ್ತಿದ್ದೇನೆ. (ಕೆಲವು ಹಿರಿಯ ಸಾಹಿತಿಗಳ ಪತ್ರಗಳನ್ನು ಬಿಟ್ಟು) ಆದರೆ ಆಕ್ಷೇಪಣೆ ಸೂಚಿಸುವ ಯಾವ ಪತ್ರವೂ ಬಂದಿಲ್ಲ. ಆದ್ದರಿಂದ ನಮಗೆ ಬೇಕಾದ ಪತ್ರಗಳನ್ನು ಮಾತ್ರ ಪ್ರಕಟಿಸಿದ್ದೇವೆ ಎಂಬ ಅಭಿಪ್ರಾಯಕ್ಕೆ ಬರಬೇಡಿ.

—ಸಂ.

ಸುತ್ತದೆ ಆದರೂ ಬರೆಯುವೆ. ಕವಿ ನಿಸಾರ್ ಜೊತೆ ಮಾತಾಡುವಾಗಿನ ಸಹಜತೆ ಅಕಾಡೆಮಿಯ ಅಧ್ಯಕ್ಷ ಹಾಗೂ ಕವಿ ನಿಸಾರ್ ಜೊತೆ ಮಾತಾಡುವಾಗ ನನಗೆ ಇರಲಿಕ್ಕಿಲ್ಲವೆಂಬ ಗುಮಾನಿಯಿಂದ ನರಳುತ್ತಿರುವೆ.

ನಿನ್ನ

ರಮಜಾನ್ ದರ್ಗಾ

ಪ್ರಿಯ ಶೂದ್ರ,

ಮಾರ್ಚ್ ತಿಂಗಳ ಶೂದ್ರದಲ್ಲಿ ನಿಮ್ಮ (ನಿಸಾರ್‌ರಿಗೆ ಬರೆದ) ಪತ್ರ ಮೆಚ್ಚುಗೆಯಾಯಿತು. ನಮ್ಮ ಸಾಂಸ್ಕೃತಿಕ ವಲಯದ ಕಲುಷಿತತೆ ಕಂಡರೆ ದಿಕ್ಕೇ ತೋಚದಂತಾಗುತ್ತದೆ. ಹೀಗಿರುವಾಗ ಹೀಗೆ ಧೈರ್ಯವಾಗಿ (ಹೆಸರುಗಳ ಸಹಿತ) ಬಹಿರಂಗ ಪತ್ರ ಬರೆಯುವುದರಿಂದ ಕೊಂಚವಾದರೂ ಸುಧಾರಣೆ ಸಾಧ್ಯವಾಗಬಹುದೇನೋ. ಈ ಕಲುಷಿತತೆ ಬಗ್ಗೆ ಜಿಗುಪ್ಸೆ ಹೊಂದಿದವರೂ ಬರೀ ಮುಗುಂ ಆಗಿ ಮಾತ್ನಾಡುತ್ತ ಹೋಗುವುದರಿಂದ ಉಪಯೋಗವಿಲ್ಲ.

ನಿಮ್ಮ
ಕೆ. ಲಕ್ಷ್ಮಿನರಸಿಂಹ,
ಯಾದಗಿರಿ

ಪ್ರಿಯ ಶೂದ್ರ

ಮಾರ್ಚ್ 84ರ ಸಂಚಿಕೆ ತಲುಪಿತು. ಸಾಹಿತ್ಯ ಅಕಾಡೆಮಿ ಅಧ್ಯಕ್ಷ ನಿಸಾರ್ ಅಹಮದ್‌ರವರಿಗೆ ಬರೆದ 'ಒಂದು ಪತ್ರ' ಓದಿದೆ. ನಿಮ್ಮ ಬಿಚ್ಚು ನುಡಿಗಳು ತುಂಬ ಹಿಡಿಸಿತು. ಅದೊಂದು - ಪತ್ರ ಲೇಖನಗಳಲ್ಲಿ ಒಂದು ಅಪೂರ್ವದಾಖಲೆ ಎಂದೇ ನನ್ನ ಭಾವನೆ. ನಿಮಗೆ ಅದಕ್ಕಾಗಿ ನನ್ನ ಅಭಿನಂದನೆಗಳು.

ಇತಿ ನಿಮ್ಮವ
ಕೆ.ಜಿ. ನಾಗರಾಜಪ್ಪ,
ತುಮಕೂರು

ಪ್ರಿಯರೆ,

ಮಾರ್ಚ್ 84ರ ಶೂದ್ರದಲ್ಲಿ ತಾವು ನಿಸಾರ್ ಅಹಮದ್‌ರವರಿಗೆ ಬರೆವ ಪತ್ರ ತುಂಬ ಮೆಚ್ಚಿಗೆಯಾಯ್ತು.

ನಿಮ್ಮ
ಶ್ರೀನಿವಾಸರಾವ್ ಜೋಳಟ್ಕೆ,
ಮುಂಬಯಿ

ಪ್ರಿಯ ಶೂದ್ರ,

ನಿಸಾರ್‌ಗೆ ಬರೆದ ಪತ್ರ ಮತ್ತು ಹೆಚ್. ನರಸಿಂಹಯ್ಯನವರ ಬಗ್ಗೆ ಬರೆದ ಮಾತುಗಳು ನನಗೆ ತುಂಬ ಇಷ್ಟವಾಯಿತು.

ನಿಮ್ಮ
ಮಿೂನಾ,
ಮೈಸೂರು

ಪ್ರೀತಿಯ ಶೂದ್ರ

ಮಾರ್ಚ್ ಸಂಚಿಕೆ ತಲುಪಿದೆ. ಈ ಬಾರಿ ನನಗೆ ತುಂಬಾ ಇಷ್ಟವಾದ ಎರಡು ಲೇಖನಗಳಿವೆ. ನಿಸಾರ್‌ರ ಭಾಷಾ ವೈಶಿಷ್ಟತೆ ಕುರಿತ ಪ್ರಬಂಧ ಹಾಗೂ ನಿಮ್ಮ ಪತ್ರ. ಇತ್ತೀಚೆಗೆ ಪ್ರಕಟವಾಗುತ್ತಿರು. ಹಿರಿಯ ಕವಿ ಸಾಹಿತಿಗಳ ಸಂದರ್ಶನಗಳು ಸಂಚಿಕೆಯ ಮೌಲ್ಯವನ್ನು ಹೆಚ್ಚಿಸಿವೆ. ವೀಣಾದಾರಸಂಥವರ ಬರಹಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿಸಿ ಪ್ರಕಟಿಸುವುದೂ ಕೂಡ ತುಂಬ ಒಳ್ಳೆಯದು. ಕನ್ನಡೇತರ ಭಾಷೆಗಳ ಪರಿಚಯವಿಲ್ಲದ ನನ್ನಂಥವರಿಗೆ ಇವು ಬಲು ಉಪಯುಕ್ತ.

ಇಂತು ವಿಶ್ವಾಸದಿಂದ
ಬಿ. ಟಿ. ಲಲಿತಾನಾಯಕ್
ರಾಯಚೂರು

ಪ್ರಿಯ ಶೂದ್ರರಿಗೆ,

ನಿಸಾರರಿಗೆ ಬರೆದ ಪತ್ರ ಅರ್ಥವತ್ತಾಗಿದೆ. ಆತ್ಮೀಯವಾಗಿ ಪತ್ರ ಬರೆಯುವಾಗ, ಅಲ್ಲದೆ ಅದನ್ನು ಬಹಿರಂಗಗೊಳಿಸುವಾಗ ಸಾಕಷ್ಟು ಎಚ್ಚರ

ವಹಿಸಬೇಕಾಗುತ್ತದೆ. ಸುತ್ತಲೂ ಧೂರ್ತರಿರುವಾಗಲೂ ಅಂತವರನ್ನು ಎದುರಿಸಲಾರದೆ ನಮ್ಮ ಪ್ಪಕ್ಕೇ ನಾವೇ ಇರುವುದು ಅಥವಾ ಕೆಲವೊಮ್ಮೆ ಅಂತವರನ್ನು ಹೊಗಳಿ ನಮ್ಮ ಬೇಳೆ ಬೇಯಿಸಿಕೊಳ್ಳುವುದನ್ನು ಕಾಣುತ್ತೇವೆ. ಇಂಥ ಸಂದರ್ಭದಲ್ಲಿ ಸಾಂಸ್ಕೃತಿಯ ವಲಯಗಳಲ್ಲೂ ನಡೆಯುವ ಹೊಲಸು ರಾಜಕೀಯಗಳ ಬಗೆಗೆ, ಸ್ಥಾನಮಾನ ಪ್ರಶಸ್ತಿ ಮುಂತಾದುವುಗಳ ಬಗೆಗೆ ಸ್ಟ್ಣ ಪುಟ್ಟ ಮಾತಾಡುವ "ದೊಡ್ಡ" ಜನರ ಬಗ್ಗೆ ಧೈರ್ಯವಾಗಿ ಪತ್ರಬರೆದಿದ್ದಕ್ಕೆ ಸಂತೋಷವಾಗುತ್ತದೆ.

ನಿಮ್ಮ

**ಬಂದಗದ್ದೆ ರಾಧಾಕೃಷ್ಣ**

ಮಾನ್ಯರೇ,

ಫೆಬ್ರವರಿ ಸಂಚಿಕೆಯಲ್ಲಿ ಶ್ರೀಕಂಠಮೂರ್ತಿಯವರ ಭಾಷಾ ಚಳುವಳಿಗೆ ಸಂಬಂಧಿಸಿದಂತೆ ಮಾರ್ಚಿ ಸಂಚಿಕೆಯಲ್ಲಿ ಶ್ರೀ ಕೆ. ಜನಾರ್ಧನ ತುಂಗರವರು ಬರೆದ ಪ್ರತಿಕ್ರಿಯೆಗೆ ನನ್ನ ಪ್ರತಿಕ್ರಿಯೆಯನ್ನು ಬರೆಯಲಿಚ್ಛಿಸುತ್ತೇನೆ.

ಯಾವುದೇ ಒಂದು ಚಳುವಳಿಯಿಂದಾದ ಪರಿಣಾಮಗಳ ಬಗ್ಗೆ ಬರೆಯುವುದು ಎಂದೂ ಪ್ಯಾಷನ್ ಆಗುವುದಿಲ್ಲ, ಬದಲಿಗೆ ಚಳುವಳಿಯಿಂದಾದ ಒಳಿತು ಕೆಡುಕುಗಳ ಬಗ್ಗೆ ಯೋಚಿಸುವ ಅವಕಾಶ ಸಿಗುತ್ತದೆ. ನಮ್ಮ ಎಲ್ಲಾ ಸಮಸ್ಯೆಗಳಿಗೆ ಪ್ರಜಾಸತ್ತಾತ್ಮಕ ಸಾಮೂಹಿಕ ಚಳುವಳಿಯ ಮಾರ್ಗದಿಂದ ಮಾತ್ರ ಪರಿಹಾರವನ್ನು ಕಂಡುಕೊಳ್ಳಲು ಸಾಧ್ಯ. ಐದು ವರ್ಷಗಳಿಗೊಮ್ಮೆ ಬರುವ ಚುನಾವಣೆಗಳಲ್ಲಿ ವಿಧಾನಸಭೆಗೆ ಅಥವಾ ಪಾರ್ಲಿಮೆಂಟಿಗೆ 'ಪ್ರತಿನಿಧಿ' ಗಳನ್ನು ಆರಿಸಿ ಕಳುಹಿಸಿ ಕೈಕಟ್ಟಿ ಕುಳಿತುಕೊಳ್ಳುವುದರಿಂದ ಏನೂ ಪ್ರಯೋಜನವಿಲ್ಲ. ಆದರೆ ಯಾವುದೇ ಚಳುವಳಿಯನ್ನು ಸಂಘಟಿಸಿ, ಬೆಳೆಸುವಾಗ ಅದು ಶೋಷಿತ ಜನತೆಯ ವಿಮೋಚನೆಗೆ ಪೂರಕವಾಗಿ, ಪ್ರಜಾ ಸತ್ತಾತ್ಮಕ ಮೌಲ್ಯಗಳ ಮೇಲೆ, ಜನತೆಯ ಐಕ್ಯತೆಯನ್ನು ಬೆಳೆಸುತ್ತದೆಯೇ ಇಲ್ಲವೋ ಎಂಬ ಅಂಶವನ್ನು ಮುಖ್ಯವಾಗಿಟ್ಟುಕೊಳ್ಳಬೇಕು. ನಮ್ಮ ಜೀವನದ ಎಲ್ಲಾ ಜ್ವಲಂತ ಸಮಸ್ಯೆಗಳಿಗೆ ಬೆಲೆಏರಿಕೆ, ಬಡತನ. ನಿರುದ್ಯೋಗ, ಅನಕ್ಷರತೆ, ಶೋಷಣೆ ಇಂದಿನ ಶೋಷಣೆಯುಕ್ತ ಬಂಡವಾಳಶಾಹಿ ವ್ಯವಸ್ಥೆ ಕಾರಣವಾಗಿರುವುದನ್ನು ಯಾವ ಪ್ರಜ್ಞಾವಂತ ವ್ಯಕ್ತಿಯು ಅಲ್ಲಗಳೆಯಲಾರರು. ಇಲ್ಲಿ ಭಾಷಾ ಸಮಸ್ಯೆಯು ಸಹ ಇದರಿಂದ ಹೊರತಾಗಿಲ್ಲ. ವರ್ಗವಿಭಜಿತ ಸಮಾಜದಲ್ಲಿ ಶೋಷಿತ ವರ್ಗದ ಜನತೆಯ ಐಕ್ಯತೆಯನ್ನು ಮುರಿಯಲು; ಭಾಷೆ. ಜಾತಿ, ಮತ, ಮತ್ತು ಪ್ರಾಂತೀಯವಾದದ ವಿಷ ಬೀಜವನ್ನು ಬಿತ್ತಿ ಪೋಷಿಸುತ್ತಿರುವ ಬಂಡವಾಳಶಾಹಿ

ವರ್ಗದ ಪಿತೂರಿಗೆ ಇಂದು ಕೇವಲ ಕರ್ನಾಟಕದಲ್ಲೇ ಏಕೆ ಇಡಿ ದೇಶದಲ್ಲಿ ನಡೆಯುತ್ತಿರುವ ಘಟನೆಗಳೇ ಸಾಕ್ಷಿ ನೀಡುತ್ತವೆ. ನಿರುದ್ಯೋಗ ಇಂದು ಕರ್ನಾಟಕದಲ್ಲಿ ಮಾತ್ರವಲ್ಲ ಇಡೀ ದೇಶದಲ್ಲಿ ವ್ಯಾಪಕವಾಗಿ ಬೆಳೆಯುತ್ತಿದೆ. ಶೇಕಡ 70 ರಷ್ಟು ಜನತೆ ಅಕ್ಷರಜ್ಞಾನದಿಂದ ವಂಚಿತರಾಗಿದ್ದು ವರ್ಷ ವರ್ಷವು ಹೆಚ್ಚುತ್ತಿರುವ ಲಕ್ಷಾಂತರ ನಿರುದ್ಯೋಗಿಗಳಿಗೆ ಪ್ರತಿಯಾಗಿ ಕೇವಲ ಬೆರಳಿಕೆಣೆಯಷ್ಟು ಮಾತ್ರ ಉದ್ಯೋಗಾವಕಾಶಗಳು ಸಿಗುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಇದರಲ್ಲೂ ಲಂಚ ರುಷುವತುಗಳಿಗೆ ಮಾತ್ರ ಪ್ರಾಧಾನ್ಯ ಸಿಗುತ್ತಿದೆ. ಇಂತಹ ಪರಿಸ್ಥಿತಿಯಲ್ಲಿ ಹೆಚ್ಚಿನ ಶಿಕ್ಷಣಾವಕಾಶ, ಉದ್ಯೋಗಾವಕಾಶಕ್ಕಾಗಿ ಮತ್ತು ಇನ್ನಿತರ ಜ್ವಲಂತ ಸಮಸ್ಯೆಗಳ ವಿರುದ್ಧ ಚಳುವಳಿಗಳನ್ನು ಬೆಳಸಬೇಕು. ಇದು ಪ್ರಜಾಸತ್ತಾತ್ಮಕ ಮೌಲ್ಯಗಳ ಮೇಲೆ, ಉನ್ನತ ನೀತಿ, ನೈತಿಕತೆ ಆಧಾರದ ಮೇಲೆ ರೂಪಿತವಾಗಿರಬೇಕು. ಆಗ ಮಾತ್ರ ಇಂದಿನ ನಮ್ಮ ಎಲ್ಲಾ ಸಮಸ್ಯೆಗಳ ವಿರುದ್ಧ ಯಾವುದೇ ಜಾತಿ, ಮತ, ಭಾಷೆಯ ಭೇದ ಭಾವವಿಲ್ಲದೇ ಎಲ್ಲಾ ಶೋಷಿತ ಜನತೆ ಒಗ್ಗಟಾಗಿ ಹೋರಾಡಬಲ್ಲರು.

ರಾಜ್ಯದಲ್ಲಿ ನಡೆದ ಭಾಷಾ ಚಳುವಳಿ ಪ್ರಜಾಸತ್ತಾತ್ಮಕ ಮೌಲ್ಯಗಳ ಆಧಾರದ ಮೇಲೆ, ಶೋಷಿತ ಜನತೆಯ ಐಕ್ಯತೆಯನ್ನು ಬೆಳಸಿ ಇಂದಿನ ಎಲ್ಲಾ ಸಮಸ್ಯೆಗಳಿಗೆ ಕಾರಣವಾದ ಬಂಡವಾಳಶಾಹಿ ವ್ಯವಸ್ಥೆಯ ವಿರುದ್ಧ ಹೋರಾಟ ಮಾಡುವ ನಿಟ್ಟಿನಲ್ಲಿ ನಡೆಯಿತೆ ? ಇದಕ್ಕೆ ಉತ್ತರವಾಗಿ 18-1-84 ರಂದು ನಡೆದ ಬಂದ್ ಮತ್ತು ನಂತರ ಘಟನೆಗಳಲ್ಲಿ ಶ್ರೀಕಂಠಮೂರ್ತಿಯವರ ಒಂದು ಅನುಭವ ಮಾತ್ರವಲ್ಲ, ಅನ್ಯ ಭಾಷೀಯ ಮುಗ್ಧ ಶೋಷಿತ ಜನತೆಯ ಮೇಲೆ ಅಕ್ರಮಣ, ಲೂಟಿ, ಮಿಗಿಲಾಗಿ ಜನರ ಮನಸ್ಸಿನಲ್ಲಿ ಬೆಳೆಯುತ್ತಿರುವ ಭಾಷಾಂಧಾಭಿಮಾನದ ವಿಷ ಬೀಜ ಸಾಕ್ಷಿ ನೀಡುತ್ತವೆ.

ಚಳುವಳಿಗಳುಬೇಕು, ಆದರೆ ಸಮಾಜದ ಪ್ರಗತಿಗೆ, ಶೋಷಿತ ಜನತೆಯ ವಿಮೋಚನೆಗೆ ಪೂರಕವಾಗಿದ್ದು, ಪ್ರಜಾಸತ್ತಾತ್ಮಕ ಮೌಲ್ಯಗಳ ಮೇಲೆ, ಉನ್ನತ ನೀತಿ, ನೈತಿಕತೆಯ ಆಧಾರದ ಮೇಲೆ ಸಂಘತವಾಗಿರಬೇಕು. ಆಗ ಮಾತ್ರ ಭಾಷಾ ಸಮಸ್ಯೆ ಮಾತ್ರವಲ್ಲ, ನಮ್ಮ ಜನಜೀವನವನ್ನು ದುರ್ಭಲಗೊಳಿಸುತ್ತಿರುವ ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಬಹುದು.

—ಎಂ. ತಿಮ್ಮಯ್ಯ
ಬೆಂಗಳೂರು

# 'ಅಮೃತ ಮತ್ತು ಗರುಡ' ಕುರಿತು :

—ಬಿ. ಸಿ. ದೇಸಾಯಿ

"It means that to find the reality alluded to by seeking abstract man no longer but real man instead, it is necessary 'to turn to society' and to undertake an analysis of the ensemble of the social relations"

—**Althussar, 'For Marx'**

ಡಿ. ಆರ್. ನಾಗರಾಜರ 'ಅಮೃತ ಮತ್ತು ಗರುಡ' ವಿಮರ್ಶಾ ಸಂಕಲನ ಬಹಳ ಮಹತ್ವದ್ದು ಎಂದು ಹೇಳುವಾಗ ನನ್ನ ಅರ್ಥ ಇಷ್ಟು : ಈ ಪುಸ್ತಕದಲ್ಲಿನ ವಿಧಾನಗಳನ್ನು, ಯೋಚನಾ ಕ್ರಮವನ್ನು ನಾವು ಅರ್ಥೈಸಿಕೊಂಡು ಒಪ್ಪಬೇಕಾದರೆ ಅಥವಾ ಒಪ್ಪದಿರಬೇಕಾದರೆ ಹೊಸ ಜ್ಞಾನಸಂದರ್ಭವನ್ನು, ಪ್ರಜ್ಞೆಯನ್ನು ಹೊಂದಬೇಕಾಗುವ ಅನಿವಾರ್ಯತೆಯನ್ನು ಎದುರಿಸಬೇಕಾಗುತ್ತದೆ.

ಯಾವುದೇ ಕ್ಷೇತ್ರದಲ್ಲಿ ಸರಿಯಾದ್ಯತಾತ್ವಿಕ ನಿಲುವಿನಿಂದ ಪ್ರಶ್ನೆಯನ್ನು ಅಥವಾ ಪ್ರಶ್ನೆಗಳನ್ನು ಪ್ರೊಜ್ ಮಾಡಿದಾಗ ಮಾತ್ರ ಸತ್ಯದ ತಿಳವಳಿಕೆಯ ಸಾಧ್ಯತೆಗಳು, ಪ್ರಸ್ತುತದಲ್ಲಿ ಕವಿದಿರುವ ರಿಯಿಫಿಕೇಶನ್ ಮುರಿದು ಹುಟ್ಟುತ್ತವೆ. ನಮ್ಮನ್ನು, ನಮ್ಮ ಅನೇಕ ಸಾಮಾಜಿಕ ಅನುಷ್ಠಾನಗಳಲ್ಲಿ ಒಂದಾದ ಸಾಹಿತ್ಯವನ್ನು ಇತಿಹಾಸ ಹೇಗೆ 'ನಿರ್ಧರಿಸಿದೆ' ಎಂಬ ಯಕ್ಷ ಪ್ರಶ್ನೆಯನ್ನು (ಸ್ಫಿಂಕ್ಸ್ ಪ್ರಶ್ನೆ ಎನ್ನಬಹುದು) ಒಂದು ಸರಿಯಾದ ತಾತ್ವಿಕ ಫೋಕಸ್ಸಿಗೆ ತರುವ ಮೂಲಭೂತ ಕೆಲಸವನ್ನು ಈ ಗ್ರಂಥ ಮೊದಲ ಬಾರಿಗೆ ಮಾಡಿದೆ.

ವಿಶೇಷಣಗಳ ಯಾದಿಯಿಂದ ಈ ಕೃತಿಯ ಮಹತ್ವವನ್ನು ಹೇಳಲಾಗುವುದಿಲ್ಲ. ಅರಿವಿನ ಬೆಳವಣಿಗೆಯ ಭರವಸೆಯನ್ನು ಕೊಡುವ ಇಲ್ಲಿನ ಯೋಚನಾಕ್ರಮ ಓದುಗನಿಗೆ ಹೆಣಗಾಟದ ಅನಿವಾರ್ಯ ಕರಾರು ಹಾಕುತ್ತದೆ.

ಇಲ್ಲಿ, ಗ್ರಂಥದ ಕೆಲವೊಂದು ವಾದಗ್ರಸ್ತ ಅಂಶಗಳನ್ನು ಮಾತ್ರ ಚರ್ಚೆಗೆ ಆಯ್ದುಕೊಳ್ಳುವ ಕಾರಣ ಅವು ಎಂಥ ಮಹತ್ವದ ಸಮಸ್ಯೆಗಳನ್ನು ಪ್ರತಿನಿಧಿಸುತ್ತವೆ ಎಂಬುದನ್ನು ತೋರಿಸುವುದಕ್ಕಾಗಿ. ಇಲ್ಲಿ ಗಮನಿಸಬೇಕಾದ ಇನ್ನೊಂದು ಸಂಗತಿ ಎಂದರೆ ಮಾರ್ಕ್ಸಿಸ್ಟ್ ವಿಮರ್ಶೆ, ಸತ್ಯಕ್ಕಿರುವ ಐತಿಹಾಸಿಕ ನೆಲೆಯನ್ನು ಅದರ ಎಲ್ಲ ಆಯಾಮಾಗಳ ಇಡಿತನದಲ್ಲಿ ಶೋಧಿಸುವ ಪ್ರಕ್ರಿಯೆ ಆಗಿರುವುದರಿಂದ ಬಹಳ ತೊಡಕಿನ ಪ್ರಕ್ರಿಯೆಯೂ ಆಗಿವೆ. ಎಲ್ಲವನ್ನೂ ಹೊಸ ದೃಷ್ಟಿಕೋನದಿಂದ ಪ್ರಾರಂಭದಿಂದಲೇ ಹೊಸ ರೀತಿಯಲ್ಲಿ ವ್ಯಾಖ್ಯಾನಿಸುತ್ತ, ವಿವರಿಸುತ್ತ ಹೋಗಬೇಕಾದುದರಿಂದ ಇದೊಂದು 'ಕ್ಷೇತ್ರ' ವಾಗುವವರೆಗೂ ಈ ವಿಮರ್ಶೆಯ ಬಿಡಿ ಎಳೆಗಳು ಅಸಮಗ್ರತೆಗೆ ಒಳಗಾಗುವುದು ಅನಿವಾರ್ಯವಾಗಿರುತ್ತದೆ. ಹೀಗಿದ್ದಾಗ ನಾಗರಾಜರ ಕೆಲವೊಂದು ವಿಮರ್ಶಾ ವಿಧಾನಗಳು ತಮ್ಮ ನಿಲುವಿನ ತಾತ್ವಿಕ ಆಳದ ಸಮಗ್ರತೆಯನ್ನು ಹೊಂದದೇ 'ಕೊಚ್ಚಿ ಕೊಂಡು ಹೋಗುವ' ಸಾಮಾನ್ಯೀಕರಣಗಳಾಗುವ ಅಪಾಯಕಾರಿ ಸೂಚನೆಗಳಾಗುತ್ತವೆ.

ಮೊದಲನೆಯ ಲೇಖನದಲ್ಲಿ (ಸಾಹಿತ್ಯ ಮತ್ತು ತತ್ವಜ್ಞಾನ) ಸತ್ಯಕ್ಕೆ ಯಾರು ವಾರಸುದಾರರು ಎಂಬ ಬಗ್ಗೆ ಪಾಶ್ಚಿಮಾತ್ಯ ಸಂಸ್ಕೃತಿಯಲ್ಲಿ ಸಾಹಿತ್ಯ ಮತ್ತು ತತ್ವಜ್ಞಾನಗಳ ನಡುವಿನ ಹೋರಾಟವನ್ನು ಸಮಸ್ಯೆಯಾಗಿ ಲೇಖಕರು ಪ್ರಸ್ತಾಪಿಸುತ್ತಾರೆ. ಸಾಹಿತ್ಯದ ಅಸ್ತಿತ್ವಾತ್ಮಕ (ontological) ಸಾತತ್ಯ ಅಥವಾ ಖಂಡಿತತೆ ಸತ್ಯಕ್ಕೆ ವಾರಸುದಾರಿಕೆಯನ್ನು ಸ್ಥಾಪಿಸುವುದರಲ್ಲಿಯೇ ಇರುವುದರಿಂದ ಇದು ಬಹಳ ಮಹತ್ವದ ಸಮಸ್ಯೆಯಾಗಿದೆ. ಇದನ್ನು ಅದರ ತಾತ್ವಿಕ ನೆಲೆಯಲ್ಲಿ ನಾಗರಾಜ್ ವಿಚಾರಿಸದೆ ಕೇವಲ ಉಲ್ಲೇಖ ಮಾಡುತ್ತಾರೆ. ಗ್ರೀಕ್ ಸಂಸ್ಕೃತಿ ಶೈಶವಾವಸ್ಥೆಯಲ್ಲಿದ್ದಾಗ ಅಲ್ಲಿನ ಜನರು ಅಮೂರ್ತ ಪರಿಕಲ್ಪನೆಗಳಲ್ಲಿ ವಿಚಾರ ಮಾಡಲು ಅಸಮರ್ಥರಾಗಿದ್ದರು. ಇನ್ನೂ ಸಾಧ್ಯತೆಗಳ ಸ್ವರೂಪದಲ್ಲಿದ್ದ ರಾಜ್ಯ, ನಾಗರೀತ್ವ, ನೈತಿಕತೆ, ಪ್ರೇಮ ಮುಂತಾದ ಅಮೂರ್ತ(abstract) ಸತ್ಯಗಳು ವೈಚಾರಿಕ ಚೌಕಟ್ಟುಗಳಾಗಿ ಹುಟ್ಟದಿದ್ದಲ್ಲಿ ಆ ಸಂಸ್ಕೃತಿಯ ಉಳಿಯುವಿಕೆ ಒಂದು ಪ್ರಶ್ನೆ ಆಗಿತ್ತು. ಆಗಿನ ಸಾಹಿತ್ಯಕ ಪ್ರಕ್ರಿಯೆಗೆ ಹೊರತಾಗುವ ವೈಚಾರಿಕತೆಯ ಅನಿವಾರ್ಯತೆಯನ್ನು ಕಂಡುಕೊಂಡ ಪ್ಲೇಟೊ ಸಾಹಿತಿಗಳನ್ನು ಉಗ್ರವಾಗಿ ಟೀಕಿಸಿದ. (ಇದನ್ನು Preface to Plato ದಲ್ಲಿ Havelock ಅವರು ಅಮೂಲಾಗ್ರವಾಗಿ ಚರ್ಚಿಸಿದ್ದಾರೆ.)

ಇದಲ್ಲದೆ ಸಾಹಿತ್ಯ ಮತ್ತು ತತ್ವಜ್ಞಾನ ಇವುಗಳ ಸತ್ಯಾನ್ವೇಷಣೆಯ ದಾರಿಗಳಲ್ಲಿನ ಮೂಲಭೂತ ವ್ಯತ್ಯಾಸವನ್ನು ಮತ್ತು ಇತಿಹಾಸದ ಬೆಳವಣಿಗೆಯ ಪ್ರತಿಯೊಂದು ಹಂತದಲ್ಲಿ ಈ ಎರಡಕ್ಕೂ ತಮ್ಮದೇ ಆದ ಗ್ರಹಿಕೆಯ ಮಿತಿಗಳು ಬೀಳುವುದನ್ನು ಹೇಳದೆ ಇದ್ದುದ್ದರಿಂದ,"ನೀಚ್ಸೆ ಸಾಕ್ರೇಟಿಸ್‌ನ ಮೇಲೆ ಮಾಡಿದ ತೀವ್ರ ಟೀಕೆಯನ್ನು ನಾವು ಅರ್ಥ

ಮಾಡಿಕೊಳ್ಳಬೇಕಾದದ್ದು ಈ ಹಿನ್ನೆಲೆಯಲ್ಲಿಯೇ. ಅನುಮಾನ, ಪ್ರಮಾಣ ತಾರ್ಕಿಕ ನಿಕೃಷ್ಟತೆಗಳ ಈ ರೀತಿಯ ತತ್ವಜ್ಞಾನ ಕಲೆಯ ಸಾವು ಎಂಬ ನಾಗರಾಜರ ಮಾತು (ಪುಟ 4) ಬರಿ ರ್ಹೆಟರಿಕ್ ಆಗುತ್ತದೆ. ಸಾಹಿತ್ಯವನ್ನು 'ಧರ್ಮ' ವಾಗಿಸಲು ಹವಣಿಸುವ ನೀಚ್ಸೆಯ ಅವೈಚಾರಿಕತೆ ಇಲ್ಲಿ ಮರೆ ಮಾಚಲ್ಪಡುತ್ತದೆ. 'ದುರಂತ ಸಾಹಿತ್ಯ' ದ ಬಗೆಗಿನ ಹೆಗೆಲ್‌ನ ವಿಚಾರಕ್ಕೆ ನೀಚ್ಸೆಯ ಕಲ್ಪನೆಯನ್ನು ಹೋಲಿಸಿದಾಗ ಅದು ಭ್ರಮೆಯ ಅರಚಾಟ ಮಾತ್ರವಾಗುವುದನ್ನು ಕಾಣುತ್ತೇವೆ. ನಾಝಿ ರ್ಹೆಟರಿಕ್ಕಿಗೆ ಇದು ಎಷ್ಟು ಸಮೀಪವೆಂಬುದನ್ನು ಗಮನಿಸದೇ ಹೋದಾಗ ವಿಮರ್ಶೆಯಲ್ಲಿ ಬದುಕು ಮತ್ತು ಸಾಹಿತ್ಯವನ್ನು ಗ್ರಹಿಸುವ ಪ್ರಕ್ರಿಯೆಯಲ್ಲಿಯೇ ಕಂದರ ಬೀಳುತ್ತದೆ.

ಹಾಗೆಯೇ "ಸಾಹಿತ್ಯ ವಿಮರ್ಶಕ ಜಾರ್ಜ್‌ಲ್ಯುಕಾಚ್ : ಶುದ್ಧ ಚಿಂತನೆಗೆ ವಾಸ್ತವವನ್ನು ಸಮಗ್ರವಾಗಿ ಗ್ರಹಿಸುವ ಶಕ್ತಿ ಇಲ್ಲ. ಮೂರ್ತವಾದದ್ದರ ಮೂಲಕವೇ ಇದು ಸಾಧ್ಯ. ಕಥನಕಲೆ ಮಾತ್ರವೇ ವಾಸ್ತವವನ್ನು ಅಖಂಡವಾಗಿ ಹಿಡಿಯಬಲ್ಲದು" (ಪುಟ 57 ಖ್ಯಾತ ಮಾರ್ಕ್ಸಿಸ್ಟ್ ಲ್ಯುಕಾಚ್‌ನನ್ನು ಈ ರೀತಿ ಅಂಶಿಕವಾಗಿ ಮಂಡಿಸುವುದು ಅತ್ಯಂತ ವಿಪರ್ಯಾಸದ ಸಂಗತಿಯಾಗಿದೆ. ಬದುಕಿನ ಇಡಿತನವನ್ನು ಗ್ರಹಿಸಲಶಕ್ತವಾದ ಡಯಲೆಕ್ಟಿಕಲ್ ಅಲ್ಲದ ವೈಚಾರಿಕತೆಯನ್ನು ಮಾತ್ರ ಲ್ಯುಕಾಚ್ ಹಳಿದಿದ್ದಾನೆ. ಇಡಿ ಇಡಿತನವನ್ನು ಆಕೃತಿಯನ್ನಾಗಿಸದ ಕಲಾಕೃತಿಗಳನ್ನು ಹಳಿದಿದ್ದಾನೆ. ಅಪಕ್ವ ಅರಿವಿನ ಮಟ್ಟದಲ್ಲಿ ತಾತ್ಕ್ಷಣಿಕವಾಗಿ (immediacy) ಸ್ಪಟಿಕೀಕರಣಗೊಳ್ಳುವ ವೈಚಾರಿಕತೆಯನ್ನೂ ಕಲಾಕೃತಿಯನ್ನೂ ಸಮವಾಗಿಯೇ ತೂಗಿ ತೀವ್ರವಾಗಿ ಟೀಕಿಸಿದ್ದಾನೆ. (....Lukacs' theoretical quest for deeper understanding of the complexities of mediation in a world dominated by the dangerously narrow perspectives that arise on the foundations of reifying immediacies"

—Istvan Meszaros,
"Lukacs concept of Dialectic"

ಮಾರ್ಕ್ಸಿಸ್ಟ್ ತಾತ್ವಿಕತೆ ಕಾಗ್ನಿಷನ್‌ದ ಎಲ್ಲ ಸ್ವರೂಪಗಳ ರ್‍ಯಾಡಿಕಲ್ ವಿಶ್ಲೇಷಣೆಯಿಂದ ಶುರುವಾಗಿ ಕ್ರಾಂತಿಯ ಪ್ರಾಕ್ಸಿಸಿಗೆ ಬಂದು ಮುಟ್ಟುತ್ತದೆ. "ಕಥನ ಕಲೆ ಮಾತ್ರವೇ ವಾಸ್ತವವನ್ನು ಅಖಂಡವಾಗಿ ಹಿಡಿಯಬಲ್ಲದು" ಎಂಬ ಸಂಚಿಕೆ

ಲ್ಯುಕಾಚ್‌ನವಾಗಿದ್ದರೆ ಬಾಲ್ಜಾಕ್ ಅಥವಾ ಗಾರ್ಕಿಯ ಬದಲಾಗಿ ಹೆಗೆಲ್, ಮಾರ್ಕ್ಸ್, ಲೆನಿನ್‌ರನ್ನು ತನ್ನ ತಿಳವಳಿಕೆಯ ಅಡಿಪಾಯವಾಗಿ ಏಕೆ ಮಾಡಿಕೊಂಡ ? ವಿಮರ್ಶೆಯನಷ್ಟೆ ಬರೆಯದೇ ಅತಿಮುಖ್ಯ ಮಹಾ ಪ್ರಬಂಧಗಳಾದ History and Class Consciousness, Ontology of Social being, Destruction of Mind ಗಳನ್ನು ಆತ ಯಾಕೆ ಬರೆಯುತ್ತಿದ್ದ ? ಈ ಪ್ರಶ್ನೆಗಳನ್ನು ನಮ್ಮನ್ನು ನಾವೇ ಕೇಳಿಕೊಳ್ಳಬೇಕಾದ ಅವಶ್ಯಕತೆ ಇದೆ.

* * *

ಕಾದಂಬರಿ ಕುರಿತ ಇಲ್ಲಿನ ಎಲ್ಲ ಬರವಣಿಗೆ ಒಂದು ಹೊಸ ತಾತ್ವಿಕ ಆಯಾಮವನ್ನು ಕನ್ನಡ ವಿಮರ್ಶಾಕ್ಷೇತ್ರದಲ್ಲಿ ಮೊದಲ ಬಾರಿಗೆ ಉದ್ಘಾಟಿಸುತ್ತದೆ, 19ನೇಯ ಶತಮಾನದ ಕೊನೆಗೆ ಮತ್ತು ಈ ಶತಮಾನದ ಪೂರ್ವಾರ್ಧದಲ್ಲಿ ಕೊಲೆನಿಯಲ್ ಸ್ಥಿತಿಯಲ್ಲಿ ಹೊಸದಾಗಿ ಉದಯಿಸಿದ ವಿಶಿಷ್ಟ ರಾಷ್ಟ್ರವಾದ, ನಮ್ಮ ಕಾದಂಬರಿ ರಚನೆಯನ್ನೇ ಹೇಗೆ ನಿರ್ಧರಿಸಿದೆ ಎಂಬುದರ ಅತ್ಯಂತ ಸೂಕ್ಷ್ಮ ವಿಶ್ಲೇಷಣೆಯನ್ನು ನಾಗರಾಜರು ನೀಡಿದ್ದಾರೆ.

ಕುವೆಂಪು, ಕಾರಂತರ ಬಗ್ಗೆ ಬರೆಯುವಾಗ ನಮ್ಮ ಐತಿಹಾಸಿಕ ಸ್ಥಿತಿ, ಕಾದಂಬರಿಕಾರರ ಜೀವನ ದೃಷ್ಟಿಯನ್ನು, ಸತ್ಯವನ್ನು ಗ್ರಹಿಸುವಲ್ಲಿ ಅಲ್ಲಿನ ಕಂದರಗಳನ್ನು ಹೇಗೆ ಸೃಷ್ಟಿಸಿವೆ ಎಂಬುವರ ಮಹತ್ವದ ಒಳನೋಟ ಈ ಲೇಖನಗಳಿಗೆ ಲಭಿಸಿದೆ. ನಾಗರಾಜ್ ಹೇಳುವ ಎಲ್ಲವನ್ನೂ ಮಹತ್ವದ್ದೆಂದು ಒಪ್ಪಿಕೊಂಡ ನಂತರ ನನ್ನ ಕೆಲವು ಅನುಮಾನಗಳನ್ನು ಇಲ್ಲಿ ಮಂಡಿಸುವ ಅವಶ್ಯಕತೆ ಇದೆ. ಇದರ ವಿಸ್ತೃತ ಚರ್ಚೆ ಮಾತ್ರ ತಿಳುವಳಿಕೆಯ ಕಂದರವನ್ನು ತುಂಬೀತು.

ಯಾವುದೇ ಸಾಹಿತ್ಯಕೃತಿಯ ಆರ್ಥಿಕ ಸಾಮಾಜಿಕ ವಿಶ್ಲೇಷಣೆಯನ್ನಷ್ಟೇ ಮಾಡುವ ಸಾಂಪ್ರದಾಯಿಕ ಮಾರ್ಕ್ಸಿಸ್ಟ್ ವಿಮರ್ಶಕರಿಗೆ ಎಮಿಲಿ ಬ್ರಾಂಟೆಯ "ವುದರಿಂಗ್ ಹೈಟ್ಸ್" ಮತ್ತು ಮೆಲ್‌ವಿಲ್‌ನ 'ಮಾಬಿಡಿಕ್' ಕಾದಂಬರಿಗಳಂತೆ ಕುವೆಂಪು ಅವರ ಕಾದಂಬರಿಗಳೂ ಸವಾಲಾಗುತ್ತವೆ. (ಇದು ಲೇಖಕರಿಗೆ ತಿಳಿದರೂ ಇನ್ನೂ ಮುಂದೆ ಹೋಗಿ ಸಮಸ್ಯೆಯನ್ನು ಬಿಡಿಸುವ ಹೊಸ ವಿಮರ್ಶೆಯ ಪರಿಸರಗಳನ್ನು ಅವರು ಹಾಕಿಕೊಂಡಿಲ್ಲ ಎಂದು ಅನಿಸುತ್ತದೆ. ಇದನ್ನು ಅವರ ವಿಮರ್ಶಾಪ್ರಜ್ಞೆಯ ಬಗ್ಗೆ ಎಲ್ಲ ಆದರವಿಟ್ಟುಕೊಂಡು ಹೇಳುತ್ತಿದ್ದೇನೆ. ಯಾಕೆಂದರೆ ಪ್ರಾಥಮಿಕ ಹಂತವನ್ನು ಅವರು ತುಂಬ ಚನ್ನಾಗಿ ಮೊದಲಬಾರಿಗೆ ಉದ್ಘಾಟಿಸಿದ್ದಾರೆ.) ಆರ್ಥಿಕ-ಸಾಮಾಜಿಕ ರಚನಾಕ್ರಮ ಹಾಗೂ ಬರಹಗಾರನ ಪ್ರಜ್ಞೆಯ ಸ್ವರೂಪದ ನಡುವೆ ಕಾರ್ಯಕಾರಣ

ಪ್ರಕ್ರಿಯೆಯ ಕೊಂಡಿಯನ್ನು ಬೆಸೆಯುವುದು ಹಗುರವಾದ ಕೆಲಸವಲ್ಲ. ಅಷ್ಟು ದೂರ ವಿಮರ್ಶೆ ಸಾಗುವಷ್ಟು ನಮ್ಮ ಜ್ಞಾನಶಾಸ್ತ್ರಗಳು ತಮ್ಮ ಒಳನೋಟಗಳನ್ನೇ ನೀಡಿಲ್ಲ.

1. ನಮ್ಮ ಸಾಮಾಜಿಕ ಇತಿಹಾಸದಲ್ಲಿ ಒಂದು ವೃತ್ತಿ ಮತ್ತು ಧಾರ್ಮಿಕತೆ ಯಾಕೆ 'ಅಂತರ್‌–ಬೀಗ' (Inter Lock) ಹಾಕಿಕೊಳ್ಳುತ್ತವೆ ಎಂಬುದರ ಸರಿಯಾದ ವಿವೇಚನೆ ಆಗದೆ, ಜಾತಿ ಪದ್ಧತಿ ಕುರಿತಾಗಲಿ, ಲೋಹಿಯಾವಾದಿಗಳು ಎತ್ತುವ ವರ್ಗಪರಿಕಲ್ಪನೆ ಬಗೆಗಿನ ಆಕ್ಷೇಪಣೆಯನ್ನಾಗಲಿ ಮತ್ತು ಕುವೆಂಪು ಕಾದಂಬರಿಗಳಲ್ಲಿನ ವರ್ಗಪ್ರಜ್ಞೆಯ ಸಂಕೀರ್ಣ ಸ್ವರೂಪದ ಬಗೆಗಾಗಲಿ ಸರಿಯಾದ ವಿಶ್ಲೇಷಣೆ ನೀಡಲಾರವು.

2. ಬಂಡವಾಳಶಾಹಿಪೂರ್ವ ಐತಿಹಾಸಿಕ ಹಂತಗಳಲ್ಲಿನ ಸಾಮಾಜಿಕ ಸ್ಥಿತಿಯಲ್ಲಿ, ವರ್ಗಪ್ರಜ್ಞೆ ಶುದ್ಧವಾಗಿ ಸ್ಫಟಿಕೀಕರಣದ ಮುನ್ನ, ಶ್ರಮದ (teleological structure) ಕುರಿತು ವಿಶ್ಲೇಷಿಸಲು ಲ್ಯೂಕ್ಯಾಚ್ ತನ್ನ 'Ontology of Social Being'ದ 'labour' ಸಂಪುಟದಲ್ಲಿ ಪ್ರಯತ್ನಿಸಿದ್ದಾನೆ.) ಉದ್ದೇಶಾಕೃತಿಯನ್ನು ಅಥವಾ ಆ ಹಂತದಲ್ಲಿನ ಮನುಷ್ಯ ನಿಸರ್ಗದಲ್ಲಿನ ಅಂತರ್‌ಕ್ರಿಯೆಯನ್ನು ಇಡಿಯಾಗಿ ವಿವೇಚಿಸುವುದು ತೀರಾ ಅವಶ್ಯವಾಗಿದೆ. ಯಾಕೆಂದರೆ ಆದಿಮ ಸಂಸ್ಕೃತಿಯಲ್ಲಿ ಅಥವಾ ಮಧ್ಯಯುಗೀನ ಸಂಸ್ಕೃತಿಯಲ್ಲಿ ಧರ್ಮ ಜೀವನವನ್ನು ರೂಪಿಸುವಲ್ಲಿ, ಅರ್ಥೈಸುವಲ್ಲಿ ಎಂಥ ಮಹತ್ವದ ಪಾತ್ರವಾಡಿದೆ ಎಂಬುದನ್ನು ಅರಿಯದೆ ವರ್ಗಪ್ರಜ್ಞೆ ಶುದ್ಧವಾಗಿ ಸ್ಫಟಿಕೀಕರಗೊಳ್ಳುವುದಕ್ಕೆ ಇಂದು ಯಾವ residual overdetermination ಕಾರಣವಾಗಿದೆ ಎಂಬುದನ್ನು ಗೊತ್ತುಹಚ್ಚಲಾರೆವು. ಜತೆಗೆ ಒಂದು ಸಂಸ್ಕೃತಿ ಶೋಷಣೆಯ ಮೇಲೆ ನಿಂತೂ ಅತ್ಯಂತ ಶ್ರೀಮಂತ ಕಲಾಭಿವ್ಯಕ್ತಿಯನ್ನು ಯಾಕೆ ಮತ್ತು ಹೇಗೆ ಸೃಷ್ಟಿಸುತ್ತದೆ,—ಇಲ್ಲಿ ಡಾಂಟೆ, ಶೇಕ್ಸ್‌ಪಿಯರ್, ಉಪನಿಷತ್, ಮಹಾಭಾರತ ನೆನೆದರೆ ಸಾಕು—ಅದರ ಸ್ವರೂಪಾತ್ಮಕ ರಚನಾಕ್ರಮ ಏನು ಎಂಬುದನ್ನು ತಿಳಿಯಲಾರದೆ ಹೋಗುತ್ತೇವೆ.

3. ಸಾಂಪ್ರದಾಯಿಕ ಮಾರ್ಕ್ಸಿಸ್ಟ್ ವಿಮರ್ಶೆ ಕೆಲವೊಂದು ಮೂಲಭೂತ ಸಂಬಂಧಗಳನ್ನು ವಿಮರ್ಶಿಸಲು ನಿರ್ಲಕ್ಷಿಸಿದೆ. ಉದಾ : ಕಾಮ. 18ನೆಯ ಶತಮಾನದಲ್ಲಿ ಜೊನಾಥನ್ ಸ್ವಿಫ್ಟ್‌ನ ಕೃತಿಯಲ್ಲಿ ಅಮೇಧ್ಯದ ಗಾಥೆಗಳು ಅಥವಾ ಖ್ಯಾತ ಮಾರ್ಕ್ಸಿಸ್ಟ್ ವಿಮರ್ಶಕ ರೇಮಂಡ್ ವಿಲಿಯಮ್ಸ್ 'ವುದರಿಂಗ್ ಹೈಟ್ಸ್' ಬಗ್ಗೆ ಹೇಳುವಂತೆ "....the relationships and the most substantial kind of personal identity come from the same experience—not that the experience is pre-social, but

that it emerges before the seperated categories of social and individual are relevant, ಅಥವಾ How are we to explain the possibility of liberating responses to a system that do not seem to have in any obvious ways been prepared by social conditions ?

....when people are living under a dominant system, you both get alternative sources of social experience in other modes which have survived from the past or are inactive opposition to the system and you seem to get other impulses which have not been produced by the known calculus of forces. But one should never then say that because they have not been produced by the known calculus of forces, they have not been produced by any forces at all. ಕಂಬಾರರ "ಸಿಂಗಾರೆವ್ವ ಮತ್ತು ಅರಮನೆ" ಕಾದಂಬರಿ ಇಂಥ ಸಮಸ್ಯೆಯನ್ನೇ ಒಡ್ಡುತ್ತದೆ.

4. ಪಾಶ್ಚಾತ್ಯ ಸಂಸ್ಕೃತಿಯು ಒಂದು ಅನುಭವದಲ್ಲಿ ಚಲಿಸುವ ಶಯ ವೊತ್ತ ಮತ್ತು ಅದು ಭಾಷೆಯಲ್ಲಿ ಸ್ಫೋಟಿಸುವ ರೀತಿ ನಮಗಿಂತ ಯಾಕೆ ಬೇರೆಯಾದಾಗಿದೆ ಎಂಬುದರ ವಿಶ್ಲೇಷಣೆ ಅಗತ್ಯ. ಶೇಕ್ಸಪಿಯರ್, ಮೆಲ್‌ವಿಲ್, ಲಾರೆನ್ಸ್, ಜಾಯ್ಸ್ ಅವರ ವೈಚಾರಿಕತೆಯನ್ನು ಹೇಗೆ ವಿವರಿಸುವುದು ? ಎಲಿಯಟ್‌ನ ಆಳ ಅಡಿಗರ ಕವಿತೆಗೆ ಸಿಗವ ಸಾಂಸ್ಕೃತಿಕ ಕಾರಣ ಯಾವುದು ? ನಮ್ಮ ಕೊಲೊನಿಯಲ್ ಸ್ಥಿತಿಯಿಂದಾಗಿ ಉಳಿದ ಹಿಂದುಳಿದ ಪಾಶ್ಚಾತ್ಯ ದೇಶಗಳಲ್ಲಿನ (ರಶಿಯನ್ ಸ್ಪಾನಿಶ್) ಮಹಾ ಸಾಹಿತ್ಯಕ ಅಭಿವ್ಯಕ್ತಿಯನ್ನು ನಾವು ಪಡೆಯಲಾರದವರಾಗುತ್ತೇವೆ ಎಂಬ ನಾಗರಾಜರ ಮಾತು ನನಗೆ ಅಪೂರ್ಣ ಅನಿಸುತ್ತದೆ.

ಯಾಕೆಂದರೆ ನಮ್ಮ ಸಂಸ್ಕೃತಿಯಲ್ಲಿ ಇತಿಹಾಸದ ನೆಲೆಗೇನೆ ಪರಕೀಯವಾಗಿ, ದೂರವಾಗಿ ನಮ್ಮ ವಿಶಿಷ್ಟ ಅನುಭವ ಪ್ರಕ್ರಿಯೆಯು ಎಲ್ಲ ರೇಂಜ್‌ಗಳನ್ನು ಒಳಗೊಳ್ಳದೆ ಕೊಚ್ಚಿಕೊಂಡು ಹೋಗುವ ವೈಶ್ವಿಕ ಸತ್ಯವಾಗಿಸುವ ಸಾಂಸ್ಕೃತಿಕ ಪ್ರವೃತ್ತಿ ನಮ್ಮ ಎಲ್ಲ ಸಾಹಿತ್ಯಕೃತಿಗಳನ್ನು ತೆಳುವಾಗಿಸಿದೆ. ಆದ್ದರಿಂದಲೇ, "ಎಂಥವೇ ತೀವ್ರ ಕ್ರಿಯೆ ಇರಲಿ ಕುವೆಂಪು ಬೀದಿಬದಿಯ ಹೂವನ್ನು ಬಾಗಿ ಎತ್ತಿಕೊಳ್ಳುವಷ್ಟರ ವ್ಯವಧಾನವನ್ನು ಉಳಿಸಿಕೊಂಡಿರುತ್ತಾರೆ". ಅಥವಾ "ಕಾರಂತರ ರಾಜಕೀಯ ತಿಳುವಳಿಕೆ 1947ಕ್ಕೇ ನಿಲ್ಲುತ್ತದೆ—ಈ ಕಾರಣದಿಂದಾಗಿಯೇ 1947ರಿಂದಾಚೆಗಿನ ಭಾರತದ

ಸಾಮಾಜಿಕ–ರಾಜಕೀಯ ಅನುಭವದ ಬಗ್ಗೆ ಕಾರಂತರ ಕಾದಂಬರಿಗಳು ಹೊಸ ಅನುಭವವನ್ನಾಗಲೀ, ಒಳನೋಟವನ್ನಾಗಲಿ ನೀಡುವುದಿಲ್ಲ" ಎಂಬಂಥ ಮಾತುಗಳು ಮೇಲು ಮೇಲಿನ ಹೇಳಿಕೆಗಳಾಗುತ್ತವೆ. ಯಾವುದೇ ಪರಂಪರೆಯ ಪ್ರಮುಖ ಲಕ್ಷಣವಾದ ಸತ್ವಶಾಲಿ ವೈಸೃಕ್ಯದ ಗೈರುಹಾಜರಿಯನ್ನು ಒಂದು ವಿಧಾನವಾಗಿಸದೆ ಅದನ್ನು ಸಮಸ್ಯೆಯನ್ನಾಗಿಸಿ ಆಳವಾಗಿ ನಮ್ಮ ಇತಿಹಾಸದಲ್ಲಿ ಹುಡುಕಿದ್ದರೆ ಇದಕ್ಕೆಲ್ಲ ಉತ್ತರ ಸಿಗಬಹುದಿತ್ತೇನೊ? ನಮ್ಮ ಸಾಹಿತ್ಯಕ್ಷೇತ್ರದಲ್ಲಿನ ಎಲ್ಲ ಬರಡು ಕೃಷಿಗೆ ಕೇವಲ ಕೊಲೊನಿಯಲ್ ಸ್ಥಿತಿ ಮಾತ್ರ ಕಾರಣವಾಗಿಲ್ಲ ಎಂದು ನನಗೆ ಅನಿಸುತ್ತದೆ. ಅದಕ್ಕೂ ನಾವು ಬಹಳ ಬಹಳ ಹಿಂದೆ ಹೋಗಿ short rangeನಲ್ಲಿ ಕ್ರಿಯಿಸುವ ನಮ್ಮ ಮನಸ್ಸನ್ನು ನಿರ್ಮಿಸಿದ ಸಾಂಸ್ಕೃತಿಕ ಮತ್ತು ಐತಿಹಾಸಿಕ ಸ್ಥಿತಿಯನ್ನು ಹುಡುಕಿಕೊಂಡರೆ ಮಾತ್ರ ಸಮಸ್ಯೆಗೆ ಉತ್ತರ ಸಿಗಬಹುದು.

ಅದೇ ರೀತಿಯಲ್ಲಿ ಒಂದು ಜನಪದ ಕೃತಿಯಲ್ಲಿ ಅಥವಾ ರಿಚ್ಯುಯಲ್‌ದಲ್ಲಿ ಬಂಡಾಯದ ಒಂದು ಎಳೆಯನ್ನು ಕೇವಲ ಹುಡುಕಿ ತೆಗೆಯುವುದು ಥೀಸಿಸ್ ಸೈದ್ಧಾಂತಿಕತೆ ಮಾತ್ರವಾಗುತ್ತದೆ. ಆ ಪ್ರತಿಭಟನೆ ಯಾವ ಪರಿಣಾಮವನ್ನು ಬೀರದೆ, ಸತತವಾಗಿ ಪುನರಾವರ್ತನೆಗೊಳ್ಳುವ ಕೇವಲ 'ಆಟ'ವಾಗಿಯೇ ಯಾಕೆ ಉಳಿಯಿತು, ಆ ಎಳೆಯನ್ನು ಹೊಂದಿದ ಜನರ ಬದುಕಿನಲ್ಲಿ, ಅರಿವಿನಲ್ಲಿ ಒಂದಿಷ್ಟಾದರೂ ಬದಲಾವಣೆಯನ್ನು ಅದು ತರದ ಸ್ಥಿತಿ ಯಾವುದು ಎಂಬುದರ ಹುಡುಕಾಟ ಮಾತ್ರ ಐತಿಹಾಸಿಕ ವಿಮರ್ಶೆಯ ಒಳನೋಟವಾಗುತ್ತದೆ. ಎಡ್ಮಂಡ್ ರೀಚ್‌ನ "ಪಾಲಿಟಿಕ್ಸ್ ಆಫ್ ಹೈಲ್ಯಾಂಡ್ ಬರ್ಮೀಸ್" ಅಥವಾ ಪೀಟರ್ ವೊರ್ಸ್ಲ‌ರ್‌ನ 'ದಿ ಟ್ರಂಪೆಟ್ ಕಾಲ್ ಸೌಂಡ್' ಮಟ್ಟದ ವಿಶ್ಲೇಷಣೆಯನ್ನು ನೀಡದ ಹೊರತು ನಮ್ಮ ಎಲ್ಲ ಜನಪದ ವಿಮರ್ಶೆ ಸಾಂಸ್ಕೃತಿಕ ಮತ್ತು ವೈಚಾರಿಕ ವೈಭವ ಮಾತ್ರವಾಗುತ್ತದೆ.

ಇಲ್ಲಿ ಹೇಳಬೇಕಾದ ಮುಖ್ಯ ಸಂಗತಿ ಇಷ್ಟು : ಒಂದು ಸಾಹಿತ್ಯಕೃತಿಯಲ್ಲಿ ಹುದುಗಿದ್ದ ಸೂಕ್ಷ್ಮಾತಿ ಸೂಕ್ಷ್ಮ ಪರಿಕರಗಳನ್ನು micro-depthನಲ್ಲಿ ಹುಡುಕಿ ವಿವರಿಸುವ ಕೆ. ವಿ. ನಾರಾಯಣ ಅವರು ಒಂದು ಸೈದ್ಧಾಂತಿಕ ನೆಲೆ ಮುಟ್ಟದವರಾಗುತ್ತಾರೆ. ಗಟ್ಟಿಮುಟ್ಟಾದ ತಾತ್ವಿಕ ನೆಲೆಯನ್ನು ಹೊಂದಿಯೂ ನಾಗರಾಜರಿಗೆ ಒಂದು ಸಮಸ್ಯೆಯ ಎಲ್ಲ ಆಯಾಮಗಳು ಸಿಗದೇ ಹೋಗುತ್ತವೆ. ಗುರಿಮುಟ್ಟುವ ಮುನ್ನವೇ ಶಕ್ತಿಹ್ರಾಸವನ್ನು ಅನುಭವಿಸುವ ವೈಚಾರಿಕತೆ ನಮ್ಮೆಲ್ಲರ ಬಹುದೊಡ್ಡ ಸಮಸ್ಯೆಯಾಗಿದೆ; ನಮ್ಮ ಸಂಸ್ಕೃತಿಯ ಸಮಸ್ಯೆಯೂ ಆಗಿದೆ.

ನಮ್ಮ ಸಾಹಿತ್ಯಕ ಮತ್ತು ಸಾಂಸ್ಕೃತಿಕ ಸಮಸ್ಯೆಗಳನ್ನು ಇಷ್ಟು ದೊಡ್ಡ ಅರಿವಿನ ಬೀಸಿನಲ್ಲಿ ಉದ್ಘಾಟಿಸುವ ಕೃತಿ—ಅಮೃತ ಮತ್ತು ಗರುಡ ನಿಜಕ್ಕೂ ಸ್ವಾಗತಾರ್ಹ. ●

## ಎಲ್ಲ ಜ್ಞಾನಕ್ಕೂ ಮೂಲ ಅಕ್ಷರ ಜ್ಞಾನ
## ಕಡ್ಡಾಯವಾಗಿ ಅಕ್ಷರ ಕಲಿಯಿರಿ

ಅಭಿವೃದ್ಧಿಯ ಹಾದಿಯಲ್ಲಿ ಅನಕ್ಷರತೆ ಒಂದು ದೊಡ್ಡ ಆತಂಕ. ಇದನ್ನು ತೊಡೆದು ಹಾಕಲು ಸರ್ಕಾರ ಎರಡು ರೀತಿಯಲ್ಲಿ ಪ್ರಯತ್ನಿಸುತ್ತಿದೆ.

1) ಕಡ್ಡಾಯ ಪ್ರಾಥಮಿಕ ಶಿಕ್ಷಣ.

2) ವಯಸ್ಕರ ಶಿಕ್ಷಣ.

○ ಈಗ ರಾಜ್ಯದ ಪ್ರತಿ ಹಳ್ಳಿಯಲ್ಲೂ ಪ್ರಾಥಮಿಕ ಶಾಲಾ ಸೌಲಭ್ಯವಿದೆ. ಐದು ವರ್ಷ ಹತ್ತು ತಿಂಗಳು ತುಂಬಿದ ಮಕ್ಕಳನ್ನು ತಪ್ಪದೆ ಶಾಲೆಗೆ ಕಳುಹಿಸುವುದು ಪೋಷಕರ ಪ್ರಥಮ ಕರ್ತವ್ಯ.

○ ಪ್ರಾಥಮಿಕ ಶಿಕ್ಷಣದಿಂದ ವಂಚಿತರಾದ 18 ವರ್ಷದಿಂದ 40 ವರ್ಷದೊಳಗಿನ ವಯಸ್ಕರಿಗ ಅಕ್ಷರ ಮತ್ತು ವೃತ್ತಿಜ್ಞಾನ ನೀಡಲು ವಯಸ್ಕರ ಶಿಕ್ಷಣ ಸೌಲಭ್ಯವಿದೆ. ಈ ಸೌಲಭ್ಯ ಪಡೆಯಲು ತಾಲ್ಲೂಕಿನ ವಯಸ್ಕರ ಶಿಕ್ಷಣ ಕಾರ್ಯಕರ್ತರು ಅಥವಾ ಸಹಾಯಕ ಶಿಕ್ಷಣಾಧಿಕಾರಿಗಳನ್ನು ಭೇಟಿ ಮಾಡಿ.

## ಮಾನವನ ಬದುಕಿಗೆ ಅಕ್ಷರ ಜ್ಞಾನ ಅತ್ಯಂತ ಅಗತ್ಯ
## ಅದನ್ನು ತಪ್ಪದ ಸಂಪಾದಿಸಿಕೊಳ್ಳಿ

ಪ್ರಕಟಣೆ :

ವಾರ್ತಾ ಮತ್ತು ಪ್ರಚಾರ ಇಲಾಖೆ
ಕರ್ನಾಟಕ ಸರ್ಕಾರ, ಬೆಂಗಳೂರು.

# ಕಣವಿಯವರ 'ಜೀವಧ್ವನಿ'

—ಶಂಕರಕಟಗಿ

ಸೂಕ್ಷ್ಮಾತಿಸೂಕ್ಷ್ಮ, ಪದಗಳ ಆಳದಲ್ಲಿ ಸಿಕ್ಕಿಕೊಂಡು ! ಸಾಮಾಜಿಕ ಕಳ ಕಳಿಯನ್ನು ನೈಜವಾಗಿಯೇ ಧ್ವನಿಸುವ ಕನ್ನಡದ ಕವಿ ಚನ್ನವೀರಕಣವಿಯವರ 'ಜೀವಧ್ವನಿ' ಕಾವ್ಯ ಸಮಕಾಲೀನ 'ಸಮನ್ವಯ' ಕಾವ್ಯದಲ್ಲಿಯೇ ಪ್ರಮುಖವಾದದ್ದು. ಕಾವ್ಯಾಕ್ಷಿಯಿಂದ ಹಿಡಿದು ಜೀವಧ್ವನಿ ವರೆಗೆ ಪರಿಸರಕ್ಕೆ ತಕ್ಕಂತೆ ಅಭಿವ್ಯಕ್ತಿಗೊಳಿದ್ದಾರೆಂದು ಹೇಳಬಹುದು.

1981ರಲ್ಲಿ 'ಜೀವಧ್ವನಿ' ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡಮಿಯ ಪ್ರಶಸ್ತಿ ದೊರೆತದ್ದು ಸ್ವಾಗತಾರ್ಹ. ಆದರೆ 1980ರಲ್ಲಿ ಪ್ರಕಟವಾದ ಈ ಕೃತಿಗೆ ಪ್ರಶಸ್ತಿ ಬಂದ ನಂತರವೇ ವಿವೇಚಿಸುವುದು ಅಸಮಂಜಸವೆನಿಸುತ್ತದೆ.

'ಜೀವಧ್ವನಿ' ಯಲ್ಲಿ ಒಟ್ಟು 40 ಕವನಗಳಿವೆ. ಅದರಲ್ಲಿ ಎಲ್ಲ ನಮೂನೆಯ ಪ್ರಕಾರಗಳೂ, ಹಾಗೂ ವಿಷಯ ವಸ್ತುಗಳೂ ಪ್ರಖರಗೊಳ್ಳುತ್ತಿವೆ. ಸಾಮಾಜಿಕ ಪ್ರಜ್ಞೆಯ ಬಗ್ಗೆ ಈ ಸಂಕಲನದಿಂದ ವಿವೇಚಿಸಿದಾಗ ಸಿಗುವ ಅಂಥ ಕವನಗಳು ಕೇವಲ ಬೆರಳೆಣಿಕೆಯಷ್ಟು ಮಾತ್ರ.

ಕ್ರೌರ್ಯ, ಅಂಧಕಾರ, ಅಜ್ಞಾನಗಳ ಕುರಿತು ವ್ಯಂಗ್ಯ—ವಿಡಂಬಣೆ, ಕಳಕಳಿಗಳ ಮೂಲಕ ಕವಿ ಸಮಕಾಲಿನತೆಯ ಬಗ್ಗೆ ವಿವೇಚಿಸುತ್ತಾನೆ. ಸಾಮಾಜಿಕ ಜಡ ವ್ಯವಸ್ಥೆಯ ಬಗ್ಗೆ ಸಿಡಿದೆದ್ದ ಹೋರಟಗಾರನ ಸಲುವಾಗಿ ಕವಿಯ ಪ್ರೀತಿ ಸಹಾನುಭೂತಿ, ಸಹೃದಯತೆಯನ್ನು ಇಲ್ಲಿ ಗುರುತಿಸಬಹುದು.

'ಸಾವಿರದ ಸತ್ಯ' ಕವನದಲ್ಲಿ ಸಾಮಾಜಿಕ ದರೋಡೆ, ಅನ್ಯಾಯದ ವಿರುದ್ಧ ಪ್ರತಿಭಟಿಸುವ ವ್ಯಕ್ತಿ ಕುರಿತು—

ತೆರೆದ ಕಣ್ಣು ತೆರೆದಂತೆ  
ಬಟಾಬಯಲು. ಹಾಡೇ ಹಗಲು ದರೋಡೆ  
ಹಿಂದೆ ಮುಂದೆ ಸುತ್ತಲೂ ಹದ್ದು–ನೆರಳಿನ ಪಹರೆ

ಚೂರು ಗುರುತು ಹತ್ತದ ಮುಖಚಹರೆ
ಯಾರ ಮುಖಾಂತರವೂ ನಿನ್ನ ಕಂಡಾಗ ಸಂಕಟ ದುಃಖ
ಮತ್ತೆ ಯಥಾಪ್ರಕಾರ :
ಪಿಸಿನೂಲು ತೆಗೆದು ಹರಿದಲ್ಲಿ ಎಳೆ ಹಚ್ಚಿ

ಹುರಿಮಾಡಿ ಸುತ್ತುವ ಚರಖ-
ಮಗ್ಗದಲ್ಲಿ ಮೆಲ್ಲಗೆ ಬಗ್ಗಿ ನೇಯುವ ಸುಖ'

—ಎಂದು ಹೇಳುವ ಕವಿಗೆ ಸಹಾನುಭೂತಿ ಇದೆ ಹೊರತು, ಸಮಾಜ ಬದಲಾವಣೆಗೆ, ಅಥವಾ ಅನ್ಯಾಯದ ವಿರೋದ ಸಿಟ್ಟು ರೋಷ ಕಂಡು ಬರುವು ದಿಲ್ಲ.

'ಅಲ್ಲ, ಮಾತ್ಹೇಳತೀನಿ' ಕವನದಲ್ಲಿ ಭ್ರಷ್ಟ ರಾಜಕೀಯದ ನಿಸ್ಸಂಕೋಚ ವಿಡಂಬನೆ ಚಿತ್ರಿತವಾಗಿದೆ. ರಾಜಕಾರಣಿಗಳ ಸೋಗಲಾಡಿತನ, ರಾಜಕೀಯ ವಿಕೃತ ಸ್ವರೂಪವನ್ನು ಪ್ರತಿಭಟಿಸುವ ಮಂದಿ ಇದ್ದಾರೆಂದು ತಿಳಿದರೂ ಅದನ್ನು ಮರೆ ಮಾಚಿಸುವ ಯತ್ನ—

'ಯಾಕ ಸುಳ್ಳುಳ್ಳ ಸುದ್ದಿ ಹಬ್ಬಿಸ್ತೀರಿ ?
ಮೊನಿ ಸಭಾದಾಗ ಯಾರೂ ನನ್ನ ಕಡೆ ಚಪ್ಪಲೀ ತೂರಿಲ್ಲ,
ಖರೇ ಹೇಳ್ತೀನಿ
ತೂರಿದ್ರೂನಾ ಅದನ್ನ ನೋಡಿಲ್ಲ
ಕಟ್ಟ ಖರೇ ಹೇಳ್ತೀನಿ,
ಆದು ನನಗೆ ಬಡದೇ ಇಲ್ಲ'

ಎಂದು ಹೇಳುವಲ್ಲಿ, ಕವಿ ರಾಜಕೀಯ ಭಯಾನಕ ಬಿರುಕನ್ನು ವಿಡಂಬನಾ ರೂಪ ದಲ್ಲಿ ಒತ್ತಿ ಹೇಳಿದ್ದಾರೆ.

'ಹುಲ್ಲು , 'ಮಳೆ , 'ಮನುವಿನ ಕಥೆ , ಕವನಗಳಲ್ಲಿ ಮಾನವೀಯ ಮೌಲ್ಯ ಗಳನ್ನು ಪರಿಶೀಲಿಸುವ ಯತ್ನ ನಡೆದಿದೆ ಎನ್ನಬಹುದು. ಅಲ್ಲದೇ ಭಾವನೆಯ ಬಿಗುವಿನಿಂದ ವೈಚಾರಿಕತೆಗೆ ಹೊಸ ಆಯಾಮದ ಪದರನ್ನು ಬಿಡಿಸಲು ಕವಿ ಪ್ರಯತ್ನಿ ಸಿದ್ದಾರೆ. 'ಜೋಳದ ಪಾಳಿ , 'ಇಳಿದ ಬೆಲೆ , ಪದ್ಯಗಳಲ್ಲಿ ಪದಾರ್ಥದ ಬೆಲೆ ಇಳಿ ಸುವ, ಮಾನವೀಯತೆ ಬೆಲೆ ಏರಿಸುವ ಕ್ರಿಯೆ ಗಂಭೀರ ವಿಡಂಭನೆಯೊಂದಿಗೆ ಒಡ ಮೂಡಿದೆ.

ಕೋಟಿ ಕೋಟಿ ಜನದೆದೆಯ ಮೀಟಿ ಹೊಸ
ಅರಿವು ತೆರೆಯುವಾತ
ಯಾರೇ ಇರಲಿ, ಬಾಗಿಲವ ತೆರೆದು ಎದ್ದೇಳಿ,
ಸುಪ್ರಭಾತ'

'ಸಾಧನೆ ಕವಿತೆಯ ಈ ಪಂಕ್ತಿಗಳು ಜಟಿಲ ಸಮಸ್ಯೆಗಳನ್ನು ಬಗೆ ಹರಿಸಲು ಕ್ರಾಂತಿಕಾರಕ ಪ್ರಚೋದನೆ, ನೀಡಿವೆಯಲ್ಲದೇ, ಹೋರಾಟಗಾರನಿಗೆ ಎದ್ದೇಳಲು ಅಗ್ರಹ ಪಡಿಸಿ 'ಸುಪ್ರಭಾತ' ಹೇಳುತ್ತಿವೆ. ಹಾಗೆ ಕವನದ ಕೊನೆಗೆ, 'ನಿರಂತರ ವಿಚಾರದ ಬದುಕಿಗೆ, ಹಚ್ಚಿರಲಿ ಸಾಲು ದೀಪ! ಎಂದು ಹೇಳುವುದು ಆರೋಗ್ಯಕರ.

'ಆದರೂ ಅವನ ನೆನಪು ಪದೇ ಪದೇ ಕಾಡುತ್ತಿದೆ
ನಮ್ಮ ಸೊಕ್ಕು ಸೋಲು ಕ್ರೂರವಾಗಿ ಬಿಚ್ಚಿಕೊಳ್ಳುತ್ತಿದೆ,
ಅವ ತಂದು ಕೊಟ್ಟ ಸ್ವಾತಂತ್ರ್ಯ
ಯಾರದೋ ಕಿಸೆಯಲ್ಲಿ ಸೇರುತ್ತಿದೆ.

'ಆದರೂ ಅವನ ನೆನಪು ಕವನದ ಮೇಲಿನ ಸಾಲುಗಳು ಗಾಂಧೀಜಿಯನ್ನು ನೆನೆಯುತ್ತ, ದುಷ್ಟ ಶಕ್ತಿಗಳ ಹಾಗೂ ಜನಸಾಮಾನ್ಯರ ಸ್ವಾತಂತ್ರ್ಯವನ್ನು ತೌಲನಿಕ ವಾಗಿ ಯೋಚಿಸುವಂತೆ ಮಾಡುತ್ತಿವೆ.

'ಕದ್ದು ಕೊರೆಯುತ್ತಿದೆ ನೆಲದಾಳದ ಖಣಿಗಳನ್ನು,
ಮಿಡಿಕಿ ಹುಡುಕುತ್ತಿವೆ ಮಣಿಗಳನ್ನು
ಎಂದೋ ಬಿದ್ದ ಮಿಂಚಿನ ಹನಿಗಳನ್ನು
ಉದ್ದುದ್ದ ತೆನೆಗಳನ್ನು............
ಮಾಶಿನ ಮೊನೆಗಳನ್ನು ಕನಸಿನಲ್ಲಿ
ಉದ್ಭವಿಸಿದ ವಿಚಿತ್ರ ಹೂವಿನ ದೊನೆಗಳನ್ನು'

'ನೆನಪು ಕವನದ ಈ ಮೇಲಿನ ಸಾಲುಗಳು ಶತ ಶತಮಾನಗಳಿಂದ ಮಾನವ ಬದುಕು ದುಷ್ಟ ಶಕ್ತಿಗಳಿಂದ ತುಳಿಯಲ್ಪಟ್ಟರೂ, ತನ್ನ ಬದುಕಿನ ಹೊಸತನಕ್ಕಾಗಿ 'ಮಿಂಚಿನ ಹನಿಗಳ ಕಡೆಗೆ 'ಕನಸಿನ ಹೂವಿನ ಗೊನೆಗಳಿಗೆ ಹರಿಯುವದನ್ನು ಕಂಡಾಗ, ಜನಪರ ಸುಳಿವು ಅರಿವಾಗುತ್ತಿದೆ.

"ಎದ್ದೀರಾ ? ನೀವು ಎದ್ದೀರಾ ? ಸದ್ಯ
"ಎದ್ದೆವೆದ್ದವು ಶರಣು, ಎದ್ದೀರಾ ! ನೀವು ಬಿದ್ದೀರಾ ?
ಎದ್ದಮೇಲು ಬುದ್ಧಿ ಸಾಧೀನದಲ್ಲಿರಲಿ,

ಹದ್ದು ಮೀರಿದ ಹಾಗೆ ನಮ್ಮೆಲ್ಲ ನಡವಳಿ,

"ಎದ್ದೀರಾ ? ಜೋಕೆ ಬಿದ್ದೀರಾ?" ಎಂದು ಜನತೆಯನ್ನು ಬಡಿದೆಬ್ಬಿಸುವುದರ ಜೊತೆಗೆ ಎಚ್ಚರವನ್ನು ಅರುಹಿಸುತ್ತಿದೆ.

ಕಣವೀಯವರ 'ಜೀವಧ್ವನಿ ಸಂಕಲನ ತನ್ನ ಸಹಜ ಭಾವನೆಯ ಮೂಲಕ, ರಾಜಕೀಯ, ಸಾಮಾಜಿಕ ಪ್ರಜ್ಞೆಯನ್ನು ಬೇರೆ ಬೇರೆ ರೂಪದಲ್ಲಿ ಹೊರ ಹೊಮ್ಮಿಸಿದೆ ಎಂದು ಹೇಳಬಹುದು.

ಆದರೆ ಈ ಸಂಕಲನ ಕಾವ್ಯವನ್ನು ಇಡಿಯಾಗಿ ಸೈದ್ಧಾಂತಿಕ ಚೌಕಟ್ಟಿನಲ್ಲಿಟ್ಟು, ಪ್ರಗತಿ ಪರ ದೃಷ್ಟಿಕೋನದಿಂದ ಕಣ್ಣಾಡಿಸಿದಾಗ, ಇದು ಎಷ್ಟರ ಮಟ್ಟಿಗೆ 'ರೆಲೆವೆನ್ಸ ಆಗಿದೆ ? ಅಂಥ ಸಾಮಾನ್ಯ ಬದುಕಿಗೆ ಹತ್ತಿರವಾಗಿ ಸ್ಪಂದಿಸುತ್ತದೆ. ಎಂಬ ಪ್ರಶ್ನೆ ಉದ್ಭವಿಸುತ್ತಿದೆ. ಕವನ ಓದುತ್ತಾ ಹೋದಂತೆ, ಕವಿ ಮನೆ ಒಳಗಡೆ ನಿಂತು ನಿಂತು ಮಳೆ ಹನಿಗಳ ಬಗ್ಗೆ ಬರೆದಂತೆ ಭಾಸವಾಗುತ್ತಿದೆ, ಅಲ್ಲದೆ ಮಾನವೀಯ ಮೌಲ್ಯವನ್ನು ಹಿಂದಿನಿಂದ ಇಂದಿನವರೆಗೆ ದಮನ ಮಾಡುತ್ತ ಬಂದ ಮತಮಾನ್ಯಗಳ ಬಗ್ಗೆಯೂ ಕಣವಿ ಕವಿತೆ ಬರೆದು 'irrelevance ಆಗಿದ್ದಾರೆ. ಉದಾಹರಣೆಗೆ– 'ಮಹಾಂತಸ್ವಾಮಿ 'ಸಜ್ಜಲಗುಡ್ಡ ಶರಣಮ್ಮ ಈ ಕವನಗಳು ಸನಾತನ ಧರ್ಮ ಹೊತ್ತು ಪ್ರಗತಿಗೆ ಅಡ್ಡಗಾಲು ಹಾಕುವುದರಲ್ಲಿ ಸಂಶಯವಿಲ್ಲ.

ಒಟ್ಟಿನಲ್ಲಿ ಕವಿ ಕಣವಿಯವರು ಯಾರಿಗೂ ಕೇಡು ಬಯುಸದೇ, ಎರಡೂ ದಂಡೆಗಳ ಮೇಲೆ ಕೈಯಿಟ್ಟು 'ಸಮನ್ವಯ ಕವಿಯಾಗಿ ಬದುಕುತ್ತಾರೆ. ಆದರೆ ಇತ್ತೀಚೆಗೆ ಸಾಮಾಜಿಕ ಮೌಲ್ಯಗಳನ್ನು ಪುನರ್‌ಮೌಲೀಕರಣಗೊಳಿಸ ಹೋರಟ ದಲಿತ ಬಂಡಾಯ ಕವಿಗಳಿಗೆ ಕಣವಿಯರ ಕೆಲವು ಕವನಗಳು ಮುಂಚೂಣಿಯಾದರೂ ಆಗ ಬಹುದು.

(ಆಕಾಶವಾಣಿ ಧಾರವಾಡ ಕೃಪೆಯಿಂದ).

ಓದಿ :

**ಕೆ. ವಿ. ತಿರುಮಲೇಶ್‌ರವರ**

**'ಮುಖಾ ಮುಖಿ'** ಕವನ ಸಂಕಲನ

(ಎರಡನೆಯ ಮುದ್ರಣ, ಅಕ್ಷರ ಪ್ರಕಾಶನ)

# ತರಾಸು

ಎಷ್ಟೋ ಬಾರಿ ನಮಗೆ ಪ್ರಿಯವಾದ ವ್ಯಕ್ತಿಗಳನ್ನು ನೋಡಬೇಕೆಂದುಕೊಂಡೇ ನೋಡಲಾಗದೆ ದಿನಗಳನ್ನು ಮುಂದೂಡಿರುತ್ತೇವೆ. ಇಂಥ ಪ್ರಿಯವಾದ ವ್ಯಕ್ತಿ ಇದ್ದಕ್ಕಿದ್ದಂತೆ ಸಾವನ್ನಪ್ಪಿದ ಸುದ್ದಿ ಬೆಳಗ್ಗೆ ಎದ್ದಾಕ್ಷಣ ಪತ್ರಿಕೆಯಿಂದ ತಿಳಿದರೆ ಆತಂಕದಿಂದ ನರಳುತ್ತೇವೆ. ಇತ್ತೀಚೆಗೆ ಪಂಜಾಬಿನಿಂದ ದಿನ ನಿತ್ಯ ಸಿಗುವ ಸಾವು-ನೋವಿನ ಪಕ್ಕದಲ್ಲಿಯೇ 'ತರಾಸು' ರವರ ನಿಧನದ ಸುದ್ದಿ ತಿಳಿದಾಗ ಹೆಚ್ಚು ಆತಂಕಗೊಂಡಿದ್ದೆ ಕಾರಣ : ಒಂದೂವರೆ ದಶಕದಿಂದ 'ತರಾಸು' ನನಗೆ ಆರಾಧ್ಯವ್ಯಕ್ತಿಯಾಗಿದ್ದರು ಅವರ ಕಾದಂಬರಿಗಳ ಮೂಲಕ. ಕಾದಂಬರಿ ಓದುವ ಹುಚ್ಚನ್ನು ಬೆಳಸಿದ್ದೇ ಅನಕೃ ಮತ್ತು ತರಾಸುರವರು. ಆದರೆ ಇಂಥ ಅಭಿಮಾನದ ವ್ಯಕ್ತಿಯನ್ನು ನೋಡುವ ಸಂದರ್ಭ ಬಂದಾಗಲೂ ನೋಡಲೇಬೇಕು ಎಂಬ ತೀವ್ರತೆಯನ್ನು ಯಾಕೆ ಬೆಳೆಸಲಿಲ್ಲ ಎಂಬುದು ಒಂದು ರೀತಿಯ ಸೋಜಿಗದ ಸಂಗತಿ ಅಥವಾ ವಿಷಾದದ ಸಂಗತಿಯೇ ಸರಿ. ಇದಕ್ಕೆ ಬೇರೆ ಬೇರೆ ಕಾರಣಗಳಿರಬಹುದು. ಇದನ್ನು ವಿಷದ ಪಡಿಸುವುದು ಕಷ್ಟ.

ಹಳ್ಳಿಯಿಂದ ನಗರಕ್ಕೆ ಒಬ್ಬ ವ್ಯಕ್ತಿ ಬಂದಾಗ ಅವನೆಲ್ಲ ಆದರ್ಶಗಳ ಪರಿಕಲ್ಪನೆಗಳು ಹೇಗೆ ರೂಪುಗೊಳ್ಳುತ್ತವೆ ಎಂಬುದರ ಮೇಲೆ ನಾವು ಒಪ್ಪಿಕೊಳ್ಳುವ ವ್ಯಕ್ತಿಯೊಡನೆ ಸಂಬಂಧ ಬೆಸೆದುಕೊಂಡಿರುತ್ತೆ ಅನ್ನಿಸುತ್ತೆ. ಯಾಕೆಂದರೆ ನಾನು ಹಳ್ಳಿಯಿಂದ ನಗರಕ್ಕೆ ಬಂದಾಗ ಅನಕೃ ಮತ್ತು ತರಾಸು ಮತ್ತು ಮ. ರಾಮಮೂರ್ತಿಯವರು ಕುಡಿದು ಮೈಸೂರಿನ ಚರಂಡಿಯಲ್ಲಿ ಬಿದ್ದಿದ್ದರಂತೆ ಎಂಬ ವಿಷಯ ತಿಳಿದು ಗಾಬರಿಗೊಂಡೆ ಅವರನ್ನು ನನ್ನ ಮನಸ್ಸಿನಿಂದ ದೂರ ಸರಿಸಿದೆ. ಈಗ ಅದೂ ಸಹ ತಿಳಿಯಾಗಿದೆ. ಯಾಕೆಂದರೆ ಈಗ ಯಾರಾದರೂ ಕುಡಿದು ಚರಂಡಿಯಲ್ಲಿ ಬಿದ್ದಿದ್ದರೆ ಅವರ ಬಗ್ಗೆ ಮೆಚ್ಚಿಗೆ ಬರುತ್ತೆ. (ನನಗೆ ಕುಡಿದು ಬೀಳುವ ಧೈರ್ಯವಿಲ್ಲವೆಂಬ ಕಾರಣಕ್ಕಾಗಿ) ಅದೇನೆ ಇರಲಿ ತರಾಸು ತಮ್ಮ ನಾನಾ ರೀತಿಯ ದೌರ್ಬಲ್ಯಗಳ ನಡುವೆ ನಮ್ಮ ಸಾಹಿತ್ಯಕ್ಕೆ ಸಾಕಷ್ಟು ಕೊಟ್ಟರು. ಇನ್ನು ಮುಂದೆ ಇವರು ಬರೆಯಲಾರರೇನೋ ಎಂದುಕೊಂಡಾಗ 'ದುರ್ಗಾಸ್ತಮಾನ' ದಂಥ ಕಾದಂಬರಿಯನ್ನು ಬರೆದಾಗ ; ಮತ್ತೊಮ್ಮೆ 'ಕಂಬನಿಯ ಕುಯಿಲು', 'ರಕ್ತರಾತ್ರಿ' ಯನ್ನು ನೆನಪು ಮಾಡಿಕೊಂಡು ಖುಷಿಪಟ್ಟೆ.

ತರಾಸು ಈಗ ನಮ್ಮ ನಡುವೆ ಇಲ್ಲ. ಯಾರೂ ನಮ್ಮ ನಡುವೆ ದೀರ್ಘಕಾಲ ವಿರುವುದಿಲ್ಲ. ಆದರೆ ಅವರು ಬಿಟ್ಟು ಕೊಟ್ಟಿರುವುದನ್ನು ಹೇಗೆ ಬಿಡಲು ಸಾಧ್ಯ.

ಸಂ.

## ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ವ್ಯಾಪಕ ಕಾರ್ಯಕ್ರಮ

ಕರ್ನಾಟಕದಲ್ಲಿ ಸಣ್ಣ ಕೈಗಾರಿಕೆ, ಗುಡಿ ಕೈಗಾರಿಕೆ, ಕೈಮಗ್ಗ, ಮತ್ತು ಕರಕುಶಲ ಕೈಗಾರಿಕೋದ್ಯಮಗಳ ಅಭಿವೃದ್ಧಿಗಾಗಿ ಹೊಸ ಉತ್ತೇಜಕ ವಾತಾವರಣ ಕಲ್ಪಿಸಲಾಗಿದೆ.

1984-85ನೇ ಸಾಲಿಗಾಗಿ ಸಣ್ಣ ಹಾಗೂ ಗೃಹ ಕೈಗಾರಿಕೆಗಳ ಅಭಿವೃದ್ಧಿ ಸಾಧಿಸಲು ಅನೇಕ ಆಶಾದಾಯಕವಾದ ಹೊಸ ಯೋಜನೆಗಳನ್ನು ರೂಪಿಸಲಾಗಿದೆ.

ಈ ಯೋಜನೆಗಳ, ಅಸಕ್ತ ಕೈಗಾರಿಕೋದ್ಯಮಿಗಳಿಗೆ ಆರ್ಥಿಕ ಸಹಾಯ ಮತ್ತು ತಾಂತ್ರಿಕ ಜ್ಞಾನವನ್ನು ಸಹ ಒದಗಿಸುತ್ತವೆ.

**ಈ ಯೋಜನೆಗಳು :**

1. 1985ನೇ ಡಿಸೆಂಬರ್ ತಿಂಗಳ ವೇಳೆಗೆ 36 ಕೋಟಿ ರೂ. ವೆಚ್ಚದಲ್ಲಿ 1510 ಕೈಗಾರಿಕಾ ಷೆಡ್ಡುಗಳನ್ನು ನಿರ್ಮಿಸಲಾಗುವುದು. ಕಳೆದ 20 ವರ್ಷಗಳಲ್ಲಿ 120 ಕೋಟಿ ರೂ. ವೆಚ್ಚದಲ್ಲಿ 2000 ಕೈಗಾರಿಕಾ ಷೆಡ್ಡುಗಳನ್ನು ಮಾತ್ರ ನಿರ್ಮಿಸಲಾಗಿತ್ತು.
2. ಔಷಧಿಗಳು, ಚರ್ಮ ಮತ್ತು ಕೈಗಾರಿಕಾ ಸಲಕರಣೆಗಳು, ಮುಂತಾದವುಗಳಿಗೆ ಸಕ್ರೀಯ ಕೈಗಾರಿಕ ಎಸ್ಟೇಟುಗಳನ್ನು ಸ್ಥಾಪಿಸಲಾಗುವುದು.
3, ಸಣ್ಣ ಕೈಗಾರಿಗಗಳ ಮಾರಾಟ ನಿಗಮದ ನಿರ್ಮಾಣ.
4. ಕೈಮಗ್ಗ ತಾಂತ್ರಿಕ ಸಂಸ್ಥೆಯ ಸ್ಥಾಪನೆ.
5. ರಾಜ್ಯದ ನಾರು ಅಭಿವೃದ್ಧಿ ನಿಗಮದ ಸ್ಥಾಪನೆ.
6. ಪ್ರಾಥಮಿಕ ಸಹಕಾರಿ ಕೈಮಗ್ಗ ಸಂಘಗಳ ಎಲ್ಲ ನೇಕಾರ ಸದಸ್ಯರುಗಳಿಗೂ ಈಗ ಅನ್ವಯವಾಗುತ್ತಿರುವ ಉಳಿತಾಯ ಕಾಣಿಕೆ ನಿದಿ ಯೋಜನೆಯನ್ನು (contributory thrift fund scheme) ಕೈಗಾರಿಕಾ ಅಭಿವೃದ್ಧಿ ನಿಗಮಕ್ಕೆ ವಿಸ್ತರಿಸುವುದು.
7. ಚರ್ಮ ತಾಂತ್ರಿಕ ಸಂಸ್ಥೆಯ ಸ್ಥಾಪನೆ.
8. ವಿದೇಶಗಳಲ್ಲಿ ವಾಸಿಸುತ್ತಿರುವ ಭಾರತೀಯರಿಗಾಗಿಯೇ ಪ್ರತ್ಯೇಕವಾಗಿ ಕೈಗಾರಿಕ ವಲಯಗಳ ಅಭಿವೃದ್ಧಿ.

## ದೇವರಾಜ ಅರಸು ಮತ್ತು
## ಕರ್ನಾಟಕ ರಾಜಕೀಯ ಪರಿಸ್ಥಿತಿ

ದಿ॥ ದೇವರಾಜ ಅರಸುರವರ ಎರಡನೇ ವರ್ಷದ ಪುಣ್ಯತಿಥಿಯ ನೆನಪಿಗಾಗಿ ಜೂನ್ ಆರರಂದು ಬೆಂಗಳೂರಿನ ಸೆನೆಟ್ ಭವನದಲ್ಲಿ 'ಶೂದ್ರ'ದ ಆಶ್ರಯದಲ್ಲಿ ಅರಸು ರವರ ಸೋಲು ಗೆಲುವುಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಒಂದು ವಿಚಾರಗೋಷ್ಠಿಯನ್ನು ಏರ್ಪಡಿಸಲಾಗಿದೆ ಇದರಲ್ಲಿ ಪ್ರೊ. ಶೆಟ್ಟಾರ್ ಪ್ರೊ. ಬಿ. ಕೆ. ಚಂದ್ರಶೇಖರ್, ಡಾ॥ ವಿ.ಕೆ. ನಟರಾಜ್, ಡಾ॥ ಚಂದ್ರಶೇಖರ್, ನರೇಂದ್ರ ಪಾಣಿ ಹಾಗೂ ಸಬಾಸ್ಟಿನ್ ಜೋಸೆಫ್ ಮುಂತಾದವರನ್ನು ಚರ್ಚೆಯಲ್ಲಿ ಭಾಗವಹಿಸಲು ಕೇಳಿಕೊಳ್ಳಲಾಗಿದೆ. ಸಮಯ ಸಿಕ್ಕಿದರೆ ಭಾಗವಹಿಸಿ.

—ಸಂ.

L/NP/KRNU/72 No. M (2) PRB 211/73-4

ಮುಂದಿನ ಸಂಚಿಕೆಯಲ್ಲಿ:

ರಾಮಚಂದ್ರಶರ್ಮ — ಚಿ. ಶ್ರೀನಿವಾಸರಾಜು — ಸವಿತಾಪೈ
ರಮಜಾನ್‌ದರ್ಗಾ — ಪ್ರಕಾಶ್‌ಜಾದವ್ — ಶ್ರೀನಿವಾಸರಾವ್ ಜೋಕಟ್ಟೆ — ವೇಣುಗೋಪಾಲ
ಸೊರಬ — ಜರ್ಮೈನ್‌ಗ್ರೀರ್ — ಜಿ.ಪಿ. ಬಸವರಾಜ.



ಪುಷ್ಪವತಿ: ಕೆ.ಕೆ. ಹೆಬ್ಬಾರ್. (ಕೃಪೆ: ಮರಿಶಾಮಚಾರ್‌ರವರ ಹೆಬ್ಬಾರ್‌ರ ಬಗೆಗಿನ ಕೃತಿ)

Printed at : Shalivahan Printers, Banglore-53 Editor & Publisher
M SRINIVAS